KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಜುಲೈ ೨೧, ೨೦೧೧, (ಆಷಾಢ ೩೦, ಶಕ ವರ್ಷ ೧೯೩೩) | ಸಂಚಿಕೆ ೨೯ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು, ಅಯ್ಯನ ಕೆರೆಯ ದುರಸ್ಥಿ ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಯ ಟೆಂಡರ್ ಕುರಿತು.

**ಓದಲಾಗಿದೆ :**

1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರುರವರ ಪತ್ರದ ಸಂಖ್ಯೆ : ಮುಸ(ದ)ವ/ತಾಂ–2/ಸಇಂ–2/ಚಿಕ್ಕಮಗಳೂರು/ಕಡೂರು/ಅಯ್ಯನಕೆರೆ/ಇ–ಟೆಂಡರ್/1344/2011/892, ದಿನಾಂಕ : 10–2–2011.
2. ಸರ್ಕಾರದ ಆದೇಶ ಸಂಖ್ಯೆ : ಸನೀಇ 26 ಕೆಜಿದು 2010, ದಿನಾಂಕ : 23–10–2010.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ : 5–3–2011ರ ಪತ್ರ ಸಂಖ್ಯೆ : ಮುಸದ/ಆಪ್ತಶಾಖೆ/ಟೆಂಡರ್/10–11/452.

ಪ್ರಸ್ತಾವನೆ :

ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು, ಅಯ್ಯನ ಕೆರೆಯ ದುರಸ್ಥಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆರ್.ಆರ್.ಆರ್. ಯೋಜನೆಯಡಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರು ನೊಂದಣಿ ಸಂಖ್ಯೆ : 117/2010–11 ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಹಾಸನ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಚಿಕ್ಕಮಗಳೂರು ಜಿಲ್ಲಾ ಟೆಂಡರ್ ಬುಲೆಟಿನ್ | 26–7–2010 |
| ರಾಜ್ಯ ಟೆಂಡರ್ ಬುಲೆಟಿನ್ | 28–7–2010 |
| ಉದಯವಾಣಿ, ಡೆಕ್ಕನ್ ಹೆರಾಲ್ಡ್ ಹಾಗೂ ವಿಜಯ ಕರ್ನಾಟಕ ದಿನ ಪತ್ರಿಕೆ | 28–7–2010 |
| ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್ ದಿನ ಪತ್ರಿಕೆ | 29–7–2010 |

ಅನಿವಾರ್ಯ ಕಾರಣಗಳಿಂದ ಟೆಂಡರ್ ಮುಂದೂಡಿಕೆ ಪ್ರಕಟಣೆ ನೀಡಿದ್ದು ಅಂತಿಮವಾಗಿ ದಿನಾಂಕ : 30–11–2010 ರಲ್ಲಿ ನೀಡಿರುವ ಮುಂದೂಡಿಕೆ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಚಿಕ್ಕಮಗಳೂರು ಜಿಲ್ಲಾ ಟೆಂಡರ್ ಬುಲೆಟಿನ್ | 6–12–2010 |
| ರಾಜ್ಯ ಟೆಂಡರ್ ಬುಲೆಟಿನ್ | 1–12–2010 |

| | |
|---|---|
| ಡೆಕ್ಕನ್ ಹೆರಾಲ್ಡ್ ಹಾಗೂ ವಿಜಯ ಕರ್ನಾಟಕ ದಿನ ಪತ್ರಿಕೆ | 5–12–2010 |
| ಉದಯವಾಣಿ ದಿನ ಪತ್ರಿಕೆ | 6–12–2010 |
| ದಿ ನ್ಯೂ ಇಂಡಿಯನ್ ಎಕ್ಸಪ್ರೆಸ್, | 4–12–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಮೂರು ಜನ ಗುತ್ತಿಗೆದಾರರು ಮಾತ್ರ ಇ–ಪ್ರೊಕ್ಯೂರ್‌ಮೆಂಟ್ ಮುಖಾಂತರ ಟೆಂಡರ್ ದಾಖಲಾತಿಗಳನ್ನು ಡೌನ್ ಲೋಡ್ ಮಾಡಿಕೊಂಡ ಇ–ಪ್ರೊಕ್ಯೂರ್‌ಮೆಂಟ್ ಮುಖಾಂತರ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ತಾಂತ್ರಿಕ ಬಿಡ್‌ಗಳನ್ನು ದಿನಾಂಕ : 3–1–2011 ರಲ್ಲಿ ತೆರೆಯಲಾಗಿದ್ದು ಒಬ್ಬರು ಗುತ್ತಿಗೆದಾರರ ಟೆಂಡರ್ ಅರ್ಹತೆ ಇದ್ದುದರಿಂದ ಇವರ ಆರ್ಥಿಕ ಬಿಡ್‌ಗಳನ್ನು ದಿನಾಂಕ : 2–2–2011 ರಲ್ಲಿ ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪರಿಷ್ಕೃತ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ. 9,27,43,983/– |
|---|---|---|
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಹಾಗೂ ಪರೀಷ್ಕೃತ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಎಸ್. ನಾರಾಯಣ ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು | 10,56,81,067/– | 13.949 ಹೆಚ್ಚು |

ಮೇಲ್ಕಂಡಂತೆ ಶ್ರೀ ಎಸ್. ನಾರಾಯಣ ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 13.949 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂದಾನ ನಡೆಸಲು ದಿನಾಂಕ : 11–2–2011 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರು ಈ ಕಾಮಗಾರಿಯನ್ನು ನಿರ್ವಹಿಸುವಲ್ಲಿ ಉಂಟಾಗುವ ಸಮಸ್ಯೆಗಳು ಕುರಿತು ವಿವರಣೆಯನ್ನು ನೀಡಿದರು. ನಂತರ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 9,27,43,983/– ಗಳ ಮೇಲೆ ಶೇ. 10.00 ರಷ್ಟು ಹೆಚ್ಚಿನ ದರದಲ್ಲಿ ನಿರ್ವಹಿಸುವುದಾಗಿ ಸ್ವ ಇಚ್ಚೆಯಿಂದ ಪತ್ರವನ್ನು ನೀಡಿದರು. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಅಂಗೀಕರಿಸಬಹುದೆಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3 ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 9,27,43,983/– ಗಳ ಮೇಲೆ ಶೇ. 6.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 9,87,72,342/– ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 03 ಕೆಜಿದು (ತಾಂತ್ರಿಕ) 2011, ಬೆಂಗಳೂರು, ದಿನಾಂಕ : 13ನೇ ಏಪ್ರಿಲ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು, ಅಯ್ಯನ ಕೆರೆಯ ದುರಸ್ಥಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 9,27,43,983/– ಗಳ ಮೇಲೆ ಶೇ. 6.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 9,87,72,342/– ಗಳಿಗೆ (ರೂ. ಒಂಬತ್ತು ಕೋಟಿ ಎಂಬತ್ತೇಳು ಲಕ್ಷದ ಎಪ್ಪತ್ತೆರಡು ಸಾವಿರದ ಮೂರು ನೂರ ನಲವತ್ತೆರಡು) ಶ್ರೀ ಎಸ್. ನಾರಾಯಣ ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–1–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1110 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು ಖಾಜಿಕೋಟನೂರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :**

1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/08–09/4982,
ದಿನಾಂಕ: 12–09–08 ಮತ್ತು ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11,
ದಿನಾಂಕ: 30/03/2011.
2. ಸರ್ಕಾರದ ಆದೇಶ ಸಂಖ್ಯೆ: ಸನೀಇ 114 ಭೂಸ್ವಾಪ್ರ 2005, ದಿನಾಂಕ: 07/11/2008.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು ಖಾಜಿಕೋಟನೂರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ವೆಂಕಟಬೆನ್ನೂರು ಗ್ರಾಮದ ಜಮೀನುಗಳಿಗೆ ಎಂ.ಎಫ್.ಎ ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರ ಪಾವತಿಸಲು ಅನುದಾನ

ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ: 12/09/08 ಮತ್ತು 30/03/11ರ ಪತ್ರಗಳಲ್ಲಿ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆಯನ್ನು ದಿನಾಂಕ 30/06/1994ರಂದು ಹೊರಡಿಸಿದೆ. ಭೂಸ್ವಾಧೀನಾಧಿಕಾರಿಗಳು ಈ ಜಮೀನಿನ ಐತೀರ್ಪನ್ನು ದಿನಾಂಕ: 22/02/96ರಂದು ರಚಿಸಿದ್ದು, ಪ್ರತಿ ಎಕರೆಗೆ ನೀರಾವರಿ ಜಮೀನಿಗೆ ರೂ.18,900/–ಗಳು, ಖುಷ್ಕಿ ಭೂಮಿಗೆ ರೂ.12,600/–ಗಳು ಮತ್ತು ಪೋಟಖರಾಬ್ ಜಮೀನಿಗೆ ರೂ.800/–ಗಳಂತೆ ನಿಗದಿಪಡಿಸಿರುತ್ತಾರೆ.

ಐತೀರ್ಪಿನಂತೆ ಪರಿಹಾರ ಪಡೆದು ವೆಂಕಟಬೆನ್ನೂರು ಗ್ರಾಮದ ಸ.ನಂ.ಗಳ ಜಮೀನುಗಳ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಸಿವಿಲ್ ನ್ಯಾಯಾಲಯ(ಹಿರಿಯ ಶ್ರೇಣಿ) ಗುಲ್ಬರ್ಗಾದಲ್ಲಿ ಸಲ್ಲಿಸಿದ್ದ ಎಲ್.ಎ.ಸಿ. ಸಂಖ್ಯೆ: 530/98, 529/98 ಮತ್ತು 528/98ರಲ್ಲಿ ದಿನಾಂಕ: 17/04/02ರಲ್ಲಿ ಈ ಜಮೀನುಗಳಿಗೆ ಮಾರುಕಟ್ಟೆ ಬೆಲೆಯನ್ನು ಕ್ರಮವಾಗಿ ಪ್ರತಿ ಎಕರೆಗೆ ರೂ.52,500/–, ರೂ.35,000/– ಮತ್ತು ರೂ.800/–ಗಳನ್ನು ನಿಗದಿಪಡಿಸಿದೆ. ಈ ತೀರ್ಪಿನ ವಿರುದ್ಧ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ್ದ ಎಂಎಫ್‌ಎ ಸಂಖ್ಯೆ:5492/02 ಮತ್ತು 5490/02ರಲ್ಲಿ ದಿನಾಂಕ:16/09/09ರಂದು ನೀಡಿರುವ ಆದೇಶದಲ್ಲಿ ಪ್ರತಿ ಎಕರೆ ತರಿ ಜಮೀನಿಗೆ ರೂ.1,10,400/–ಗಳು ಮತ್ತು ಖುಷ್ಕಿ ಜಮೀನಿಗೆ ರೂ.1,65,400/–ಗಳನ್ನು ನಿಗದಿಪಡಿಸಿದೆ. ಎಂಎಫ್‌ಎ 5491/02ರಲ್ಲಿ ಪ್ರತಿ ಎಕರೆಗೆ ರೂ.1,10,400/–ಗಳನ್ನು ನಿಗದಿಪಡಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಇದು ಅರ್ಹ ಪ್ರಕರಣವಲ್ಲವೆಂದು ಕಾನೂನು ಇಲಾಖೆಯು ಪತ್ರ ಸಂಖ್ಯೆ: ಲಾ 30 ಎಲ್ಎಸ್‌ಪಿ 2010, ದಿನಾಂಕ: 16/01/10, ಲಾ 20 ಎಲ್ಎಸ್‌ಪಿ 2010, ದಿನಾಂಕ: 19/01/10 ಮತ್ತು ಲಾ 41 ಎಲ್ಎಸ್‌ಪಿ 2010, ದಿನಾಂಕ: 22/01/10ರಲ್ಲಿ ಅಭಿಪ್ರಾಯ ಪಟ್ಟಿರುತ್ತದೆ.

ಕಾನೂನು ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ: ಲಾ 287 ಎಲ್ಎಸ್‌ಪಿ 2010, ದಿನಾಂಕ: 18/08/10ರಲ್ಲಿ ಮೇಲ್ಕಂಡ ಉಚ್ಚ ನ್ಯಾಯಾಲಯದ ತೀರ್ಪನ್ನು ಉಲ್ಲೇಖಿಸಿ ಅದರಂತೆ ಪರಿಹಾರ ನೀಡಿರುವುದರಿಂದ, ಈ ಪ್ರಕರಣಗಳಲ್ಲೂ 4(1)ರ ಅಧಿಸೂಚನೆಯ ಹಿಂದಿನ ಅವಧಿಗೆ ಪಾವತಿಸುವ ವಿಷಯದಲ್ಲಿ ಮತ್ತು ಖರಾಬು ಜಮೀನಿಗೆ ಪರಿಹಾರ ನೀಡುವ ಬಗ್ಗೆ ಪುನರ್ ಪರಿಶೀಲನಾ ಅರ್ಜಿಯಲ್ಲಿ ಪ್ರಶ್ನಿಸಬಹುದಾದ್ದರಿಂದ, 4(1)ರ ಅಧಿಸೂಚನೆಯ ಹಿಂದಿನ ಅವಧಿಗೆ ಬಡ್ಡಿ ಹೊರತುಪಡಿಸಿ ಪರಿಹಾರ ಪಾವತಿಸಬಹುದೆಂದು ಅಭಿಪ್ರಾಯ ನೀಡಿರುತ್ತದೆ.

ಇದೇ ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಸೇರಿದ್ದ ವೆಂಕಟಬೆನ್ನೂರು ಗ್ರಾಮದ ಇತರ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶವನ್ನು ಪರಿಶೀಲಿಸಿ ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿನಾಂಕ: 07/11/08ರ ಆದೇಶದಲ್ಲಿ ಪರಿಹಾರ ನೀಡಲು ಅನುಮೋದನೆ ನೀಡಲಾಗಿದೆ.

ಪ್ರಕರಣಕ್ಕೆ ಪಾವತಿಸಬೇಕಾದ ಹೆಚ್ಚಿನ ಪರಿಹಾರದ ವಿವರ ಕೆಳಕಂಡಂತಿವೆ:

| ಕ್ರಮ ಸಂಖ್ಯೆ | ಎಲ್ಎಸಿ ಸಂಖ್ಯೆ | ಎಂಎಫ್‌ಎ ಸಂಖ್ಯೆ | ವೆಂಕಟಬೆನ್ನೂರು ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 530/98 | 5492/02 | 99/1 | 4–29 | 2010364 |
| 2 | 529/98 | 5491/02 | 99/2ಎ | 1–28 | 745210 |
| 3 | 528/98 | 5490/02 | 100 | 0–19 | 8367749 |
| | | | | 18–21 | |
| ಒಟ್ಟು | | | | | **11123323** |

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 135 ಭೂಸ್ವಾಪ್ರ 2008, ಬೆಂಗಳೂರು, ದಿನಾಂಕ: 31/03/2011**

ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು ಖಾಜಿಕೋಟನೂರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಖಾಜಿಕೋಟನೂರ ಗ್ರಾಮಕ್ಕೆ ಸೇರಿದ ಮೇಲ್ಕಂಡ ಜಮೀನುಗಳಿಗೆ ಕರ್ನಾಟಕ ಉಚ್ಚ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ರೂ.1,11,23,323–00ಗಳ (ಒಂದು ಕೋಟಿ ಹನ್ನೊಂದು ಲಕ್ಷದ ಇಪ್ಪತ್ತ್ಮೂರು ಸಾವಿರದ ಮುನ್ನೂರ ಇಪ್ಪತ್ತ್ಮೂರು ರೂ.ಗಳು ಮಾತ್ರ) ಪರಿಹಾರ ಪಾವತಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ: 19/03/2011ರಲ್ಲಿ ಒದಗಿಸಿರುವ ಪೂರಕ ಅನುದಾನ–IIIರಿಂದ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ: 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಗೋಪಾಲ್,
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 1008

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಅಂತರ್ಜಲ ವಿಭಾಗಕ್ಕೆ ಸಂಬಂಧಪಟ್ಟ ಯೋಜನೆಗಳನ್ನು 2011–12ನೇ ಸಾಲಿನಲ್ಲಿ ಮುಂದುವರಿಸುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರ ಪತ್ರ ಸಂಖ್ಯೆ:ಗಭೂಇ/ ಅಜವಿ/ಅಕೋಬಾ/ 2010–11/7443, ದಿನಾಂಕ: 25–03–2011.

**ಪ್ರಸ್ತಾವನೆ :**

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಅಂತರ್ಜಲ ವಿಭಾಗಕ್ಕೆ ಸಂಬಂಧಪಟ್ಟ ಯೋಜನೆಗಳನ್ನು 2011–12ನೇ ಸಾಲಿನಲ್ಲಿ ಮುಂದುವರಿಸಲು ಸರ್ಕಾರದ ಅನುಮೋದನೆಯನ್ನು ನೀಡುವಂತೆ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರು ಮೇಲೆ ಓದಲಾದ ದಿನಾಂಕ: 25/03/2011 ಪತ್ರದಲ್ಲಿ ಕೋರಿರುತ್ತಾರೆ.

ಈ ಪ್ರಸ್ತಾವವನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 06 ಅಜಅ 2011, ಬೆಂಗಳೂರು, ದಿನಾಂಕ: 31/03/2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಅಂತರ್ಜಲ ವಿಭಾಗದಲ್ಲಿನ ಈ ಕೆಳಕಂಡ ಯೋಜನೆಗಳನ್ನು 2011–12ನೇ ಸಾಲಿಗೆ ಮುಂದುವರಿಸಲು ಅನುಮೋದನೆ ನೀಡಲಾಗಿದೆ.

**(ಲಕ್ಷ ರೂ.ಗಳಲ್ಲಿ)**

| ಕ್ರ.ಸಂ. | ಯೋಜನೆ ಮತ್ತು ಶೀರ್ಷಿಕೆ | 2011–12ನೇ ಸಾಲಿನ ಅನುದಾನ |
|---|---|---|
| 1. | ನಿರ್ದೇಶನ ಮತ್ತು ಆಡಳಿತ 2702–02–001–0–01 | 0.00 |
| 2. | ದೂರ ಸಂವೇದನಾ ತಾಂತ್ರಿಕತೆಯಿಂದ ಅಂತರ್ಜಲ ಅಭಿವೃದ್ಧಿ 2702–02–005–0–11 | 25.00 |
| 3. | ಸಮೀಕ್ಷೆ ಮೇಲ್ಮೈ ಜಲ ಮತ್ತು ಅಂತರ್ಜಲದ ಸಂಸ್ಥೆಯ ಬಲವರ್ಧನೆ 2702–02–005–0–15 | 282.00 |
| 4. | ರಾಷ್ಟ್ರೀಯ ಜಲಶಾಸ್ತ್ರ ಯೋಜನೆ 2ನೇ ಹಂತ 2702–02–005–0–80 | 93.00 |
| 5. | ಗಿರಿಜನ ಪ್ರದೇಶ ಉಪಯೋಜನೆ 2702–02–796–0–01 | 0.00 |
| 6. | ಹರಿಜನರಿಗಾಗಿ ವಿಶೇಷ ಘಟಕ ಯೋಜನೆ 2702–02–789–0–04 | 0.00 |
| | **ಒಟ್ಟು** | **400.00** |

ಮುಂದುವರೆದ ಕಾರ್ಯಕ್ರಮಗಳಿಗೆ ಯಾವುದೇ ಹೊಸ ಘಟಕಗಳ ಪ್ರಸ್ತಾವನೆ ಇದ್ದಲ್ಲಿ ಪ್ರತ್ಯೇಕವಾಗಿ ಸರ್ಕಾರದ ಮಂಜೂರಾತಿ ಪಡೆಯುವುದು.

ಮುಂದುವರೆದ ಯೋಜನೆಗಳಡಿಯಲ್ಲಿ ಖರೀದಿಗಳಿಗೆ ಸಂಬಂಧಿಸಿದಂತೆ ಎಲ್ಲಾ ಖರೀದಿ ನಿಯಮಗಳನ್ನು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 2000ರ ಮತ್ತು ಅದರಡಿಯಲ್ಲಿನ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆ ಆದೇಶ ಸಂಖ್ಯೆ ಪಿಡಿ 17 ಐಎಂಎಂ 2005, ದಿನಾಂಕ: 10/08/2005ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಗೋಪಾಲ್,
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1009

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ರಾಯಚೂರು ಜಿಲ್ಲೆ, ಸಿಂಧನೂರು ತಾಲ್ಲೂಕಿನ ಕಲ್ಮಂಗಿ ಗ್ರಾಮದ ಹತ್ತಿರ ಹೊಸ ಜಿನುಗುಕೆರೆ ನಿರ್ಮಾಣಕ್ಕಾಗಿ ಅಗತ್ಯವಿರುವ ಜಮೀನಿನ ಭೂಸ್ವಾಧೀನ ಪ್ರಕ್ರಿಯೆಗಾಗಿ ಮುಂಗಡ ಹಣ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರ ಇವರ ದಿನಾಂಕ: 29/12/2009ರ ಪತ್ರದ ಸಂಖ್ಯೆ:ಮುಇಂ/ಸನೀ(ಉ)ವ/ಭೂಸ್ವಾ/2010–11/7767.

**ಪ್ರಸ್ತಾವನೆ :**

ಕುಷ್ಟಗಿ ಸಣ್ಣ ನೀರಾವರಿ ವಿಭಾಗದ ವ್ಯಾಪ್ತಿಯಲ್ಲಿ ರಾಯಚೂರು ಜಿಲ್ಲೆ, ಸಿಂಧನೂರು ತಾಲ್ಲೂಕಿನ ಕಲ್ಮಂಗಿ ಗ್ರಾಮದ ಹತ್ತಿರ ಹೊಸ ಜಿನುಗು ಕೆರೆ ನಿರ್ಮಾಣಕ್ಕಾಗಿ ಕಲ್ಮಂಗಿ ಗ್ರಾಮದ ಸರ್ವೆ ನಂಬರ್‌ಗಳಿಗೆ ಸೇರಿದ 30–31 ಎಕರೆ ಜಮೀನಿನ ಸ್ವಾಧೀನಕ್ಕಾಗಿ ಭೂಸ್ವಾಧೀನ ಪ್ರಕ್ರಿಯೆ

ನಡೆಸಲು ಸಂಭವನೀಯ ವೆಚ್ಚ ರೂ.30,18,600–00ಗಳನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಮುಂಗಡ ಠೇವಣಿ ಮಾಡಲು ಬಿಡುಗಡೆ ಮಾಡುವಂತೆ ಮೇಲೆ ಓದಲಾದ ದಿನಾಂಕ: 29/12/2009ರ ಪತ್ರದಲ್ಲಿ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಕೋರಿದ್ದಾರೆ.

ಸರ್ಕಾರದ ಸುತ್ತೋಲೆ ಸಂಖ್ಯೆ: ಕಂಇ 42 ಭೂಸ್ವಾಹಾ 2000, ದಿನಾಂಕ: 08/10/2001ರಲ್ಲಿ ಸೂಚಿಸಿರುವಂತೆ ಭೂಸ್ವಾಧೀನ ಪ್ರಕ್ರಿಯೆಗಾಗಿ ಭೂಸ್ವಾಧೀನ ಕಾಯ್ದೆ 4(1)ರ ಅಧಿಸೂಚನೆ ಹೊರಡಿಸುವ ಪೂರ್ವದಲ್ಲಿ ಶೇ.50ರಷ್ಟು ಮುಂಗಡ ಹಣವನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡಬೇಕಾಗಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 19 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ 31ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ರಾಯಚೂರು ಜಿಲ್ಲೆ, ಸಿಂಧನೂರು ತಾಲ್ಲೂಕಿನ ಕಲ್ಮಂಗಿ ಗ್ರಾಮದ ಹೊಸ ಜಿನುಗು ಕೆರೆ ನಿರ್ಮಾಣಕ್ಕೆ ಅಗತ್ಯವಿರುವ ಜಮೀನುಗಳ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಸಂಭವನೀಯ ಭೂಸ್ವಾಧೀನ ವೆಚ್ಚದ ಶೇ.50ರಷ್ಟು ಅಂದರೆ ರೂ.30,18,600–00 ಲಕ್ಷಗಳನ್ನು (ಮೂವತ್ತು ಲಕ್ಷದ ಹದಿನೆಂಟು ಸಾವಿರದ ಆರುನೂರು ರೂ.ಗಳು ಮಾತ್ರ) ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡಲು ಸರ್ಕಾರವು ಅನುಮೋದನೆ ನೀಡಿದೆ.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ–ಲೋಇ 105 ಆಕೋ–1/11, ದಿನಾಂಕ: 10/03/11ರಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಪೂರಕ ಅನುದಾನ–IIIರಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ: 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಗೋಪಾಲ್,
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 1010

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕ ಹೊಸೂರು ಹೋಬಳಿ ಮುರುಗಣ್ಣನಕೆರೆ ಕೆರೆ ಏರಿ ಮತ್ತು ಕೋಡಿ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರ ಐತೀರ್ಪಿನಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಸದ/ಲೆಶಾಖೆ/ಲೆಸ–1–3/ಭೂಸ್ವಾಧೀನ/10–11/2197, ದಿನಾಂಕ: 01/10/2010.

**ಪ್ರಸ್ತಾವನೆ :**

ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು ಹೊಸೂರು ಹೋಬಳಿ ಮುರುಗಣ್ಣನಕೆರೆ ಕೆರೆ ಏರಿ ಮತ್ತು ಕೋಡಿ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಹುಲುಗಿನಕಟ್ಟೆ ಗ್ರಾಮಕ್ಕೆ ಸೇರಿದ ಸ.ನಂ.ಗಳ ಜಮೀನಿಗೆ ಉಪ ವಿಭಾಗಾಧಿಕಾರಿ ಹಾಗೂ ಭೂಸ್ವಾಧೀನಾಧಿಕಾರಿಗಳು, ಸಾಗರ ಉಪವಿಭಾಗ, ಸಾಗರ ಇವರು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಹೊರಡಿಸಿದ ಐತೀರ್ಪಿನಂತೆ ಪರಿಹಾರ ಧನ ಪಾವತಿಸಲು ರೂ.15,03,187–00ಗಳನ್ನು ಬಿಡುಗಡೆ ಮಾಡುವಂತೆ ಮೇಲೆ ಓದಲಾದ ದಿನಾಂಕ: 01/10/10ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ಕರ್ನಾಟಕ ಭೂಸ್ವಾಧೀನ ಕಾಯಿದೆ ಕಲಂ 4(1)ರ ಅಧಿಸೂಚನೆಯನ್ನು ದಿನಾಂಕ: 12/08/2000ರಂದು ಹೊರಡಿಸಿದೆ. ಭೂಸ್ವಾಧೀನಾಧಿಕಾರಿಗಳು, ದಿನಾಂಕ: 19/05/2003ರಂದು ರಚಿಸಿರುವ ಐತೀರ್ಪಿನಲ್ಲಿ ಈ ಜಮೀನುಗಳ ಮಾರುಕಟ್ಟೆ ಬೆಲೆಯನ್ನು ಪ್ರತಿ ಎಕರೆಗೆ ರೂ.29,000/–ಗಳಿಗೆ ನಿಗದಿಪಡಿಸಿರುತ್ತಾರೆ. ಈ ಐತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಹೆಚ್ಚಿನ ಪರಿಹಾರಕ್ಕಾಗಿ ಸಿವಿಲ್ ನ್ಯಾಯಾಲಯ(ಹಿರಿಯ ವಿಭಾಗ) ಸೊರಬ ಇಲ್ಲಿ ಸಲ್ಲಿಸಿದ್ದ ಎಲ್.ಎ.ಸಿ. ಸಂಖ್ಯೆ: 40/07 ರಿಂದ 56/07ರಲ್ಲಿ ದಿನಾಂಕ: 15/03/2003 ರಂದು ನೀಡಿರುವ ಆದೇಶದಲ್ಲಿ ಜಮೀನುಗಳ ಮಾರುಕಟ್ಟೆ ಬೆಲೆಯನ್ನು ಪ್ರತಿ ಎಕರೆಗೆ ರೂ.74100/–ಗಳಿಗೆ ನಿಗದಿಪಡಿಸಿರುತ್ತದೆ.

ಸಿವಿಲ್ ನ್ಯಾಯಾಲಯದ ತೀರ್ಪನ್ನು ಉಲ್ಲೇಖಿಸಿ ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಸೇರಿದ್ದ ಹುಲುಗಿನಕಟ್ಟೆ ಗ್ರಾಮದ ಇತರೆ ಸ.ನಂ.ಗಳಿಗೆ ಸೇರಿದ ಜಮೀನಿನ ಭೂಮಾಲೀಕರು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಹೆಚ್ಚಿನ ಪರಿಹಾರ ನೀಡುವಂತೆ ಕೋರಿ ಸಲ್ಲಿಸಿದ್ದ ಮನವಿಗಳನ್ನು ಪರಿಶೀಲಿಸಿ ಉಪ ವಿಭಾಗಾಧಿಕಾರಿ ಮತ್ತು ಭೂಸ್ವಾಧೀನಾಧಿಕಾರಿಗಳು, ಸಾಗರ ಉಪ ವಿಭಾಗ, ಸಾಗರ ಇವರು ದಿನಾಂಕ: 11/03/2011ರಂದು ಐತೀರ್ಪನ್ನು ಹೊರಡಿಸಿರುತ್ತಾರೆ.

ಪಾವತಿಸಬೇಕಾದ ಸ.ನಂ.ವಾರು ಮೊತ್ತದ ವಿವರ ಕೆಳಕಂಡಂತಿದೆ:

| ಭೂ.ಸ್ವಾ. ಕಾಯ್ದೆ ಕಲಂ 28(ಎ)ರಡಿ ಐತೀರ್ಪಿನ ಸಂಖ್ಯೆ ಮತ್ತು ದಿನಾಂಕ ಎಲ್‌ಎಸಿ/2/2000–01/, ದಿನಾಂಕ:11/03/2011 | | | |
|---|---|---|---|
| ಕ್ರ. ಸಂ | ಹುಲುಗಿನಕಟ್ಟೆ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ ರೂ.ಗಳಲ್ಲಿ |
| 1. | 106/2 | 1–31 | 339249 |

| | | | |
|---|---|---|---|
| 2. | 106/3 | 0–01 | 268379 |
| 3. | 113/2 | 0–10 | 53131 |
| 4. | 113/4 | 0–01 | 6546 |
| 5. | 107/1 | 1–02 | 228981 |
| 6. | 82 | 0–2.75 | 18001 |
| 7. | 27/2 | 0–01 | 6546 |
| 8. | 27/3 | 0–01 | 6546 |
| 9. | 109 | 0–11.2 | 9819 |
| 10. | 27/5 | 0–1.14 | 7431 |
| 11. | 27/6 | 0–1.14 | 7431 |
| 12. | 27/7 | 0–11.2 | 8919 |
| 13. | 27/8 | 0–01 | 5946 |
| 14. | 27/9 | 0–11.4 | 7431 |
| 15. | 27/11 | 0–1.2 | 2973 |
| 16. | 32/1 | 0–11.4 | 8182 |
| 17. | 32/2 | 0–11.4 | 8182 |
| 18. | 32/5 | 0–01 | 6546 |
| 19. | 32/1 | 0–11.4 | 8182 |
| 20. | 27/1 | 0–11.2 | 8919 |
| 21. | 105 | 2–00 | 434020 |
| ಒಟ್ಟು | | | **1451360** |

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 149 ಭೂಸ್ವಾಪ್ರ 2010 ಬೆಂಗಳೂರು, ದಿನಾಂಕ 30ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕಿನ ಮುರುಗಣ್ಣನ ಕೆರೆ, ಏರಿ ಮತ್ತು ಕೋಡಿ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಹುಲುಗಿನಕಟ್ಟೆ ಗ್ರಾಮದ ಜಮೀನುಗಳಿಗೆ ಉಪ ವಿಭಾಗಾಧಿಕಾರಿ ಮತ್ತು ಭೂಸ್ವಾಧೀನಾಧಿಕಾರಿಗಳು, ಸಾಗರ ಉಪ ವಿಭಾಗ, ಸಾಗರ ಇವರು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಹೊರಡಿಸಿರುವ ಐತೀರ್ಪಿನಂತೆ ಪರಿಹಾರ ರೂ. 14,51,360–00ಗಳನ್ನು (ಹದಿನಾಲ್ಕು ಲಕ್ಷದ ಐವತ್ತೊಂದು ಸಾವಿರದ ಮುನ್ನೂರ ಅರವತ್ತು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ: 19/03/2011 ರಲ್ಲಿ ಒದಗಿಸಿರುವ ಪೂರಕ ಅನುದಾನ–IIIರಿಂದ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ: 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಗೋಪಾಲ್,

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

ಪಿ.ಆರ್. 1011

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಚಿತ್ರದುರ್ಗ ಜಿಲ್ಲೆ, ಮೊಳಕಾಲ್ಮೂರು ತಾಲ್ಲೂಕು ರಂಗಯ್ಯನದುರ್ಗ ಜಲಾಶಯದ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಸದ/ಲೆಶಾ/ಲೆಸ–1/ಭೂಸ್ವಾಧೀನ/10–11/242, ದಿನಾಂಕ: 02/02/2011.

**ಪ್ರಸ್ತಾವನೆ :**

ಚಿತ್ರದುರ್ಗ ಜಿಲ್ಲೆ, ಮೊಳಕಾಲ್ಮೂರು ತಾಲ್ಲೂಕು ರಂಗಯ್ಯನದುರ್ಗ ಜಲಾಶಯದ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ತಳವಾರಹಳ್ಳಿ ಗ್ರಾಮದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಚಳ್ಳಕೆರೆ ಸಿವಿಲ್ ನ್ಯಾಯಾಲಯವು (ಹಿರಿಯ ವಿಭಾಗ) ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ಆದೇಶದಂತೆ ಹೆಚ್ಚುವರಿ ಪರಿಹಾರ ಮೊತ್ತ ರೂ.1,48,970–00ಗಳನ್ನು ಬಿಡುಗಡೆ ಮಾಡಲು ಮೇಲೆ ಓದಲಾದ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ದಿನಾಂಕ: 02/02/11ರ ಪತ್ರದಲ್ಲಿ ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆ ದಿನಾಂಕ: 29/06/35ರ ಪ್ರಕಾರ ಭೂಸ್ವಾಧೀನಕ್ಕೊಳಪಟ್ಟ ಜಮೀನಿನ ಭೂಮಾಲೀಕರು ದಿನಾಂಕ: 26/09/96ರಂದು ರಚಿಸಿರುವ ಐತೀರ್ಪಿನಂತೆ ಹಣ ಪಡೆದು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಚಳ್ಳಕೆರೆ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ)ದಲ್ಲಿ ಎಲ್.ಎ.ಸಿ. ಪ್ರಕರಣ ದಾಖಲಿಸಿದ್ದು, ನ್ಯಾಯಾಲಯವು ಜಮೀನಿನ ಭೂಮೌಲ್ಯವನ್ನು ಪ್ರತಿ ಎಕರೆಗೆ ರೂ.9,600/–ಗಳಿಗೆ ಹೆಚ್ಚಿಸಿ ಭೂಸ್ವಾಧೀನ ಕಾಯ್ದೆಯ ಇತರೆ ಸವಲತ್ತುಗಳೊಂದಿಗೆ ಪರಿಹಾರ ನೀಡುವಂತೆ ಆದೇಶಿಸಿದೆ. ನ್ಯಾಯಾಲಯದ ಆದೇಶದಂತೆ ಪಾವತಿಸಬೇಕಾದ ಮೊತ್ತದ ವಿವರ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ಎಲ್‌ಎಸಿ ಸಂಖ್ಯೆ | ತಳವಾರಹಳ್ಳಿ ಗ್ರಾಮದ ಸ.ನಂ | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 292/02 | 32 | 0–19 | 1,48,970–00 |
| **ಒಟ್ಟು** | | | | **1,48,970–00** |

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಇದು ಅರ್ಹವಲ್ಲವೆಂದು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ: ಆರ್‌ಡಿ 147 ಎಲ್‌ಎಸಿ (ಎಲ್‌ಸಿ) 2007, ದಿನಾಂಕ: 24/01/08ರಲ್ಲಿ ಅಭಿಪ್ರಾಯ ನೀಡಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 26 ಭೂಸ್ವಾಪ್ರ 2011 ಬೆಂಗಳೂರು, ದಿನಾಂಕ 31ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಚಿತ್ರದುರ್ಗ ಜಿಲ್ಲೆ, ಮೊಳಕಾಲ್ಮೂರು ತಾಲ್ಲೂಕು ರಂಗಯ್ಯನದುರ್ಗ ಜಲಾಶಯದ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಭಟ್ರಳ್ಳಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸ.ನಂ.ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಸಂಖ್ಯೆ: 292/02ರಲ್ಲಿ ನೀಡಿರುವ ಆದೇಶದಂತೆ ಪರಿಹಾರ ರೂ.1,48,970–00 ಗಳನ್ನು (ಒಂದು ಲಕ್ಷದ ನಲವತ್ತೆಂಟು ಸಾವಿರದ ಒಂಭೈನೂರ ಎಪ್ಪತ್ತು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00– ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ: 19/03/2011ರಲ್ಲಿ ಒದಗಿಸಿರುವ ಪೂರಕ ಅನುದಾನ–IIIರಿಂದ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ: 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಗೋಪಾಲ್

ಪಿ.ಆರ್. 1012

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** 2011–12ನೇ ಸಾಲಿನ ರಾಜ್ಯ ವಲಯದಡಿ ಸಣ್ಣ ನೀರಾವರಿ ಇಲಾಖೆಯ ಯೋಜನಾ ಕಾಮಗಾರಿಗಳನ್ನು ಮುಂದುವರೆಸುವ ಬಗ್ಗೆ.

**ಪ್ರಸ್ತಾವನೆ :**

2011–12ನೇ ಸಾಲಿನ ನೀರಾವರಿ ಸವಿವರ ವೆಚ್ಚದ ಅಂದಾಜುಗಳ ಯೋಜನಾ ದಾಖಲೆಯ ವಿವಿಧ ಲೆಕ್ಕ ಶೀರ್ಷಿಕೆಗಳಡಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಲ್ಲಿ 2010–11ನೇ ಸಾಲಿನಲ್ಲಿ ಅಪೂರ್ಣಗೊಂಡಿರುವ ಕಾಮಗಾರಿಗಳನ್ನು ಪ್ರಸ್ತುತ ಸಾಲಿನ ಆಯವ್ಯಯದಲ್ಲಿ ಮುಂದುವರೆಸಲು ಮತ್ತು ಪ್ರಸಕ್ತ ಸಾಲಿನ ಯೋಜನೆಗಳನ್ನು ಅನುಷ್ಠಾನಗೊಳಿಸಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 29 ಆವಿಸಂ 2011, ಬೆಂಗಳೂರು, ದಿನಾಂಕ: 01/04/2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ 2010–11ನೇ ಸಾಲಿನಲ್ಲಿ ಅಪೂರ್ಣಗೊಂಡಿರುವ ಮತ್ತು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವ ಕಾಮಗಾರಿಗಳನ್ನು ಪ್ರಸ್ತುತ ಸಾಲಿನಲ್ಲಿ ಮುಂದುವರೆಸಲು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಅನುಮೋದನೆ ನೀಡಲಾಗಿದೆ.

ಅ. 2010–11ನೇ ಸಾಲಿನಲ್ಲಿ ಮುಂದುವರೆಸಲಾದ ಮತ್ತು ಆ ಸಾಲಿನಲ್ಲಿ ಹೊಸದಾಗಿ ಮಂಜೂರು ಮಾಡಲಾದ ಕಾರ್ಯಕ್ರಮಗಳನ್ನು ಮಾತ್ರ 2011–12ನೇ ಸಾಲಿನಲ್ಲಿ ಮುಂದುವರೆಸಿ ಅನುಷ್ಠಾನಗೊಳಿಸುವುದು.

ಆ. ಈ ಆದೇಶದ ಪ್ರಕಾರ ಮುಂದುವರೆದ ಕಾರ್ಯಕ್ರಮಗಳಿಗೆ ಯಾವುದೇ ಹೊಸ ಘಟಕಗಳ ಪ್ರಸ್ತಾವನೆ ಇದ್ದಲ್ಲಿ ಸರ್ಕಾರದ ಪ್ರತ್ಯೇಕ ಮಂಜೂರಾತಿಯನ್ನು ಪಡೆದು ಅನುಷ್ಠಾನಗೊಳಿಸುವುದು.

ಇ. ಮುಂದುವರೆದ ಯೋಜನೆಗಳಿಗೆ ಅಗತ್ಯ ಸಾಮಗ್ರಿಗಳ ಖರೀದಿಗಳನ್ನು ಎಲ್ಲಾ ಖರೀದಿ ನಿಯಮಗಳು ಮತ್ತು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳ ಪಾರದರ್ಶಕತೆ ಕಾಯ್ದೆ 2000ರ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯ ಆದೇಶ ಸಂಖ್ಯೆ: ಪಿಡಿ 17 ಐಎಂಎಂ 2005, ದಿನಾಂಕ: 10/08/2005 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ಗೋಪಾಲ್
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಅನುಬಂಧ

| | | |
|---|---|---|
| ಸಣ್ಣ ನೀರಾವರಿ ಇಲಾಖೆ | | |
| 2011–12ನೇ ಸಾಲಿಗೆ ಸವಿವರ ವೆಚ್ಚದ ಅಂದಾಜಿನಲ್ಲಿ ಒದಗಿಸಿರುವ ಅನುದಾನ | | |
| | | (ಲಕ್ಷ ರೂ.ಗಳಲ್ಲಿ) |
| ಕ್ರ. ಸಂ. | ಲೆಕ್ಕ ಶೀರ್ಷಿಕೆ | 2011–12ನೇ ಸಾಲಿಗೆ ಒದಗಿಸಿರುವ ಅನುದಾನ |
| 1 | 2 | 3 |
| **ಸಣ್ಣ ನೀರಾವರಿ ಮೇಲಿನ ಬಂಡವಾಳ ವೆಚ್ಚ–ನಬಾರ್ಡ್ ಕಾಮಗಾರಿಗಳು** | | |
| 1 | 4702–00–101–1–02–436 ಹೊಸಕೆರೆಗಳ ನಿರ್ಮಾಣ | 1,994.00 |
| 2 | 4702–00–101–1–07–436 ಕೆರೆಗಳ ಆಧುನೀಕರಣ | 2,409.00 |
| 3 | 4702–00–101–5–01–436 ಅಣೆಕಟ್ಟು ಮತ್ತು ಪಿಕಪ್ | 4,050.00 |
| 4 | 4702–00–101–3–01–436 ಏತ ನೀರಾವರಿ ಯೋಜನೆ | 2,347.00 |
| **ಸಣ್ಣ ನೀರಾವರಿ ಮೇಲಿನ ಬಂಡವಾಳ ವೆಚ್ಚ–ಪ್ರಧಾನ ಕಾಮಗಾರಿಗಳು** | | |
| 5 | 4702–00–101–1–02–139 ಹೊಸಕೆರೆಗಳ ನಿರ್ಮಾಣ | 1,673.00 |
| 6 | 4702–00–101–1–06–139 ಹಳೆಯ ಮತ್ತು ಒಡೆದ ಕೆರೆಗಳ ಜೀರ್ಣೋದ್ಧಾರ ಮತ್ತು ಕೆರೆಯ ಹೂಳೆತ್ತುವುದು | 37.74 |
| 7 | 4702–00–101–1–07–139 ಕೆರೆಗಳ ಆಧುನೀಕರಣ | 2,490.00 |
| 8 | 4702–00–101–5–01–139 ಅಣ್ಣೆಕಟ್ಟು ಮತ್ತು ಪಿಕಪ್ | 6,271.00 |
| 9 | 4702–00–101–3–01–139 ಏತ ನೀರಾವರಿ ಯೋಜನೆ | 1,705.00 |
| 10 | 4702–00–800–8–00–133 ವಿಶೇಷ ಅಭಿವೃದ್ಧಿ ಯೋಜನೆ | |
| 11 | **ವಿಶೇಷ ಘಟಕ ಯೋಜನೆ** | |
| | 4702–00–789–0–00–422 ವಿಶ್ೇಷ ಘಟಕ ಯೋಜನೆ | 8,614.02 |
| | ವಜಾ–ವಿ.ಘ ಯೋ ಸಾಮಾನ್ಯ ನಿಧಿ | |

| | | |
|---|---|---|
| 12 | ಗಿರಿ ಜನ ಉಪ ಯೋಜನೆ | |
| | 4702–00–796–0–00–423 ಗಿರಿಜನ ಉಪ ಯೋಜನೆ | 3,970.20 |
| | ವಜಾ–ಗಿ.ಉ ಯೋ ಸಾಮಾನ್ಯ ನಿಧಿ | |
| 13 | 4702–00–800–1–00–132 ಭೂಸ್ವಾಧೀನ ವೆಚ್ಚಗಳು | 1,500.00 |
| 14 | 4702–00–101–1–09–132 ಕೃಷಿಗೆ ನೇರವಾಗಿ ಸಂಬಂಧಿಸಿದ ನೀರಾವರಿ ಯೋಜನೆಗಳ ದುರಸ್ತಿ, ನವೀಕರಣ ಹಾಗೂ ಪುನರುಜ್ಜೀವನ | 4,020.00 |
| 15 | 4702–00–101–1–10–139 ಎಐಬಿಪಿ ಪ್ರಧಾನ ಕಾಮಗಾರಿಗಳು | 10,900.00 |
| 16 | 4702–00–101–2–80–139 ಕರ್ನಾಟಕ ಅಭಿವೃದ್ಧಿ ಯೋಜನೆ (ಜಲ ಸಂವರ್ಧನೆ ಯೋಜನೆ ಸಂಘ) ಪ್ರಧಾನ ಕಾಮಗಾರಿಗಳು | 24,000.00 |
| 17 | ನಿರ್ದೇಶನ ಮತ್ತು ಆಡಳಿತ | 3,086.38 |
| 18 | 2702–80–800–0–01–132 ಸಮೀಕ್ಷಾ ಕಾರ್ಯಗಳು | **100.00** |
| 19 | 2702–80–800–0–09 ಸ.ನೀ ಅಂಕಿ ಅಂಶಗಳ ಕೋಶವನ್ನು ಯುಕ್ತಗೊಳಿಸಲು ಕೇಂದ್ರ ಪುರಸ್ಕೃತ ಯೋಜನೆ | 32.66 |
| | **ಪ್ರವಾಹ ಸಂರಕ್ಷಣಾ ಕಾಮಗಾರಿಗಳು** | |
| 20 | 4711–01–103–1–00–436 ಪ್ರವಾಹ ನಿಯಂತ್ರಣ ನಬಾರ್ಡ್ ಕಾಮಗಾರಿಗಳು | 200.00 |
| 21 | 4711–01–103–1–00–140 ಪ್ರವಾಹ ನಿಯಂತ್ರಣ–ಸಣ್ಣ ಕಾಮಗಾರಿಗಳು | 450.00 |
| 22 | 4711–01–103–2–01–200 ಪ್ರವಾಹ ನಿಯಂತ್ರಣ ನಿರ್ವಹಣೆ | 50.00 |
| 23 | 4711–01–103–2–02–139 ನದಿ ನಿರ್ವಹಣೆ ಮತ್ತು ಪ್ರವಾಹ ನಿಯಂತ್ರಣ (ಭಾರತ ಸರ್ಕಾರದ ಯೋಜನೆ) | 100.00 |
| | **ನಬಾರ್ಡ್ ಮತ್ತು ನಬಾರ್ಡೇತರ ಯೋಜನೆಯ ಒಟ್ಟು ಮೊತ್ತ** | **80,000.00** |

ಗೋಪಾಲ್
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1013

## ENERGY SECRETARIAT

**Sub:** Enhancement of wind power capacity from 3.00 MW to 16.8 MW in favour of M/s Suzlon Infrastructure Services Limited - reg.

Read:
1. Government Order No. EN 204 NCE 2009 dated : 20-05-2010.
2. Letter No. KRED/08/SISL-Agasanahalli (3.00 MW to 16.80 MW)/2011/583 dated : 09/11-2-2011 received from the Managing Director, Karnataka Renewable Energy Development Limited, Bangalore.

Preamble :

In the Government Order read at (1) above, sanction has been accorded for allotment of 250.2 MW capacity Wind Power Project at Raichur, Bellary, Bijapur, Gulbarga and Haveri Districts in favour of M/s Suzlon Infrastructure Services Limited.

The Managing Director, Karnataka Renewable Energy Development Limited, Bangalore vide his letter read at (2) above, has recommended to enhance the wind power capacity from 3.00 MW (part capacity of 250.2 MW of Haveri District) to 16.8 at Agasanahalli, Nandihalli and Byadagi villages of Haveri District in favour of M/s Suzlon Infrastructure Services Limited.

The proposal has been examined in detail and hence the following order :-

**Government Order No.: EN 100 NCE 2011, Bangalore, Dated: 06-04-2011**

Government accords approval for enhancement of wind power capacity from 3.00 MW (part capacity of 250.2 MW) to 16.8 MW at Agasanahalli, Nandihalli and Byadagi villages of Haveri District in favour of M/s Suzlon Infrastructure Services Limited as detailed below :-

| Geographical Area details | Sanctioned capacity in MW | Enhancement proposed in stage-1 | No. of WTGs & rating in kw |
|---|---|---|---|
| The proposed area consists of independent NW-SE oriented ridges located on South and Southwest of Byadagi village, | | | |

| | | | |
|---|---|---|---|
| ridges are having peaks and are held in the following geographical co-ordinates :-<br>Latitude : $14^o$38'3"-$14^o$40'0"N<br>Longitude : $75^o$25'0"-$75^o$30'15"E<br>Peaks : 684,670,664,696,666,661 & 698 Amsl.<br>Toposheet No : 48 N/6 and 46 N/10 | 3.0 MW | 13.8 MW | 16.8 MW<br>(8x2100 kw) |

The Government has reserved the right to cancel/modify this Order.

The other terms and conditions of the allotment Order read at (1) above shall continue as it is.

By order and in the name of the Governor of Karnataka

PR No. 1054

**Suresh B. Krishnappanavar**

Under Secretary to Government,

Energy Department

## ENERGY SECRETARIAT

**Sub:** Enhancement of wind power capcity from 4.2 MW to 19.5 MW in favour of M/s Suzlon Infrastructure Services Limited - reg.

Read: 1. Government Order No. EN 204 NCE 2009 dated : 20-05-2010.

2. Letter No. KRED/08/SISL-Nishnigudda (4.20 to 19.5 MW)/2010/584 dated : 09/11-2-2011 received from the Managing Director, Karnataka Renewable Energy Development Limited, Bangalore.

**Preamble :**

In the Government Order read at (1) above, sanction has been accorded for allotment of 250.2 MW capacity Wind Power Project at Raichur, Bellary, Bijapur, Gulbarga and Haveri Districts in favour of M/s Suzlon Infrastructure Services Limited.

The Managing Director, Karnataka Renewable Energy Development Limited, Bangalore vide his letter read at (2) above, has recommended to enhance the wind power capacity from 4.2 MW (part capacity of 250.2 MW of Raichur District) to 19.5 at Nishnigudda, Raichur District in favour of M/s Suzlon Infrastructure Services Limited.

The proposal has been examined in detail and hence the following order :-

**Government Order No.: EN 102 NCE 2011, Bangalore, Dated: 06-04-2011**

Government accords approval for enhancement of wind power capacity from 4.2 MW (part capacity of 250.2 MW of Raichur District) to 19.5 at Nishnigudda, Raichur District in favour of M/s Suzlon Infrastructure Services Limited as detailed below :-

| Geographical Area details | Sanctioned capacity in MW | Enhancement proposed in stage-1 | No. of WTGs & rating in kw |
|---|---|---|---|
| The proposed area is of high raised plain with predominant orientation in N W-SE directions located on the East of Kottapura. It is also called Nishnigudda. The area is covered Cactus and part of it has open scrub features. It is held in the following geographical co-ordinates :-<br>Latitude : $15^o$37'30"-$15^o$49'45"N<br>Longitude : $76^o$29'10"-$76^o$31'23"E<br>Peaks : 588, 521 & 570 Amsl.<br>Toposheet No : 57 A/6 and 57 A/10 | 4.2 MW | 15.3 MW | 19.5 MW Composition of WTGs (9x2100 & 1x600 kw) |

The Government has reserved the right to cancel/modify this Order.

The other terms and conditions of the allotment Order read at (1) above shall continue as it is.

By order and in the name of the Governor of Karnataka

PR No. 1055

**Suresh B. Krishnappanavar**

Under Secretary to Government,

Energy Department

**ಇಂಧನ ಸಚಿವಾಲಯ**

**ವಿಷಯ :** ಮೆ॥ ಮೈಸೂರು ಮರ್ಕಂಟೈಲ್ ಕಂಪನಿ ಲಿಮಿಟೆಡ್ ಇವರಿಗೆ 1.5 ಮೆಗಾ ವ್ಯಾಟ್ ಸಾಮರ್ಥ್ಯದ Biomass Gasifier based power plant with producer gas engine ವಿದ್ಯುತ್ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡುವ ಬಗ್ಗೆ.

**ಓದಲಾಗಿದೆ :** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/03/ಎಂಎಂಸಿಎಲ್–ಹಾಲಾಡಿ/11/903 ದಿನಾಂಕ : 17/21–03–2011.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಪ್ರಧಾನ ವ್ಯವಸ್ಥಾಪಕರು ಮೆ॥ ಮೈಸೂರು ಮರ್ಕಂಟೈಲ್ ಕಂಪನಿ ಲಿಮಿಟೆಡ್ ಇವರಿಗೆ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಹಾಲಾಡಿ ಗ್ರಾಮದಲ್ಲಿ 1.5 MW ಸಾಮರ್ಥ್ಯದ Biomass Gasifier based power plant with producer gas engine ವಿದ್ಯುತ್ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 179 ಎನ್‌ಸಿಇ 2011, ಬೆಂಗಳೂರು, ದಿನಾಂಕ: 06–04–2011**

ಮೆ॥ ಮೈಸೂರು ಮರ್ಕಂಟೈಲ್ ಕಂಪನಿ ಲಿಮಿಟೆಡ್ ಇವರಿಗೆ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಹಾಲಾಡಿ ಗ್ರಾಮದಲ್ಲಿ 1.5 MW ಸಾಮರ್ಥ್ಯದ Biomass Gasifier based power plant with producer gas engine ವಿದ್ಯುತ್ ಘಟಕವನ್ನು ಸ್ಥಾಪಿಸಲು ಈ ಕೆಳಗಿನ ನಿಬಂಧನೆಗೊಳಪಟ್ಟು ಸರ್ಕಾರದ ನಿರಾಕ್ಷೇಪಣೆಯನ್ನು ನೀಡಲಾಗಿದೆ :–

1. The company shall obtain separate clearance from Karnataka Power Transmission Corporation Limited in respect of evacuation of power.
2. The company shall enter into wheeling and banking agreement with Karnataka Power Transmission Corporation Limited in case of selling power to third party and power purchase agreement in case of selling power to Karnataka Power Transmission Corporation Limited/ESCOMS.
3. The company shall obtain necessary statutory clearance wherever required from the respective Departments/Organizations such as Forest Department, Revenue Department & Karnataka State Pollution Control Board etc., for the power plant.
4. The detailed project report (D.P.R.) for the power plant shall be got approved by Karnataka Renewable Energy Development Limited before the commencement of the power plant.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್. 1056 ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**ಇಂಧನ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ : ಇಎನ್ 383 ಎನ್‌ಸಿಇ 2010 ಬೆಂಗಳೂರು, ದಿನಾಂಕ : 05–04–2011**

ಸರ್ಕಾರದ ಆದೇಶ ಸಂಖ್ಯೆ : ಇಎನ್ 61 ಎನ್‌ಸಿಇ 2004 ದಿನಾಂಕ 13–02–2004 ಮತ್ತು ದಿನಾಂಕ : 22–03–2004, ಇಎನ್1 ಎನ್‌ಸಿಇ 2007 ದಿನಾಂಕ : 14–02–2007 ಹಾಗೂ ಇಎನ್ 257 ಎನ್‌ಸಿಇ 2008 ದಿನಾಂಕ : 12–02–2009 ರಲ್ಲಿ ಎಲ್ಲೆಲ್ಲಿ ದಾವಣಗೆರೆ ಬ್ರಾಂಚ್ ಕೆನಾಲ್ ಎಂದು ನಮೂದಿಸಲಾಗಿದೆಯೋ

ಅದನ್ನು

ಹರಿಹರ ಬ್ರಾಂಚ್ ಕೆನಾಲ್

(Chainage at 11.9 kms from Davanagere)

ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್. 1057 ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

## ENERGY SECRETARIAT

**Sub:** Name transfer of M/s Maithri Energy Private Limited to M/s Soham Renewable Energy India Private Limited-reg.

Read: 1. Government Order No. EN 446 NCE 2006 dated : 17-03-2007.
2. Government Order No. EN 436 NCE 2007 dated : 10-12-2007.
3. Letter No. KRED/06/Sh-275/Mahadevapura/MHS/2011/948 dated : 21/22-2-2011 received from the Managing Director, Karnataka Renewable Energy Development Limited, Bangalore.

Preamble :

In the Government Order read at (1) above, approval has been accorded for allotment of 2.00 MW, Mahadevapura-2 Mini Hydel Project across Kaveri River, Near Mahadevapura village, Srirangapatna Taluk Mandya District in favour of M/s Maithri Energy Private Limited.

In the Government Order read at (2) above, approval has been accorded for the enhancement of capacity from 2.00 MW to 6.00 MW, Mahadevapura - 2 Mini Hydel Project across Kaveri River, Near Mahadevapura village, Srirangapatna Taluk, Mandya District in favour of M/s Maithri Energy Private Limited.

In the letter read at (3) above, as per the request of the developer The Managing Director, Karnataka Renewable Energy Development Limited, Bangalore has sent a proposal to Government for transfer of company's name from M/s Maithri Energy Private Limited to M/s Soham Renewable Energy India Private Limited (vide CIN No. U67000KA1991PTC012495).

The proposal has been examined in detail and hence the following order :-

**Government Order No.: EN 177 NCE 2011, Bangalore, Dated: 31-03-2011**

Government accords approval for transfer of company's name from M/s Maithri Energy Private Limited to M/s Soham Renewable Energy India Private Limited to implement 6.00 MW Mahadevapura-2 Mini Hydel Scheme across Kaveri River, Near Mahadevapura village, Srirangapatna Taluk Mandya District.

The Government has reserved the power to cancel/modify this Order.

The other terms and conditions of the Government Order read at 1 & 2 shall **IPSO FACTO** applicable.

By order and in the name of the Governor of Karnataka

PR No. 1058

**Suresh B. Krishnappanavar**
Under Secretary to Government,
Energy Department

## ENERGY SECRETARIAT

**Sub:** Enhancement of Mini Hydel Power Plant capacity from 2 MW to 9 MW of M/s Yenepoya Energy Private Limited-reg.

Read: 1. Government Order No. EN 521 NCE 2009dated : 28-04-2010.
2. Letter No. KREDL/06/SH-406/Aniyur/MHS/553/ dated : 20-1-2011/11-2-2011 received from the Managing Director, Karnataka Renewable Energy Development Limited, Bangalore.

Preamble :

In the Government Order read at (1) above, sanction has been accorded for allotment of 2 MW capacity Mini Hydel Power Project across Aniyoor Hole near Neriya Village, Belthangadi Taluk, Dhakshina Kannada District in favour of M/s Yenepoya Energy Private Limited.

In the letter read at (2) above, The Managing Director, Karnataka Renewable Energy Development Limited, Bangalore, as per the request of the Developer has recommended to Government for enhancement of capacity from 2 MW to 9 MW across Aniyoor Hole near Neriya Village, Belthangadi Taluk, Dakshina Kannada District in favour of M/s Yenepoya Energy Private Limited with the available head and discharge in the river stream.

The proposal has been examined in detail and hence the following order :-

**Government Order No.: EN 107 NCE 2011, Bangalore, Dated: 01-04-2011**

Government accords approval for enhancement of capacity from 2 MW to 9 MW across Aniyoor Hole near Neriya Village, Belthangadi Taluk, Dakshina Kannada District in favour of M/s Yenepoya Energy Private Limited (Weir Latitude - 13°05'40", Weir Longitude - 75°28'55" & Power House Latitude Weir Latitude - 13°04'02", Power House Longitude - 75°28'50"). Subject to the following conditions.

1. The Government reserves the right to cancel/modify this Order.
2. The other terms and conditions laid down in Government Order read at (1) above shall continue.

By order and in the name of the Governor of Karnataka

PR No. 1059

**Suresh B. Krishnappanavar**
Under Secretary to Government,
Energy Department

## ಸಹಕಾರ ಸಚಿವಾಲಯ

**ವಿಷಯ :** ಸಹಕಾರ ಇಲಾಖೆಯ ವ್ಯಾಪ್ತಿಗೆ ಬರುವ ವಿವಿಧ ಕಾಯ್ದೆಗಳ ಕಾರ್ಯನಿರ್ವಹಣೆಯನ್ನು ಬೆಂಗಳೂರು ನಗರ ಜಿಲ್ಲೆಗೆ ಸಂಬಂಧಿಸಿದಂತೆ ತ್ವರಿತ ಹಾಗೂ ಪರಿಣಾಮಕಾರಿಯಾಗಿ ನಿರ್ವಹಿಸಲು ಮೂರು ವಲಯ/ವೃತ್ತಗಳನ್ನಾಗಿ ಪರಿವರ್ತಿಸುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಸಿಎಂಡಬ್ಲ್ಯೂ 114 ಸಿಇಎಂ 1992 ದಿನಾಂಕ : 16–07–1992.
2. ಸರ್ಕಾರದ ಆದೇಶ ಸಂಖ್ಯೆ : ಕಂಇ 152 : ಮುನೋಮು 2008 ದಿನಾಂಕ : 07–05–2008.
3. ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಓ 50 ಪಿಎಂಸಿ 2008, ದಿನಾಂಕ : 27–05–2008.
4. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಆರ್‌ಸಿಎಸ್ : ಎಡಿಎಂ : 57 : ಎಸ್‌ಓಆರ್/ 2010–11, ದಿನಾಂಕ : 08–07–2010.
5. ಸರ್ಕಾರದ ಆದೇಶ ಸಂಖ್ಯೆ : ಸಇ 302 ಎಸಸೇ 2010, ದಿನಾಂಕ : 17–08–2010.
6. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಆರ್‌ಸಿಎಸ್ : ಎಡಿಎಂ : 57 : ಎಸ್‌ಓಆರ್/ 2010–11 ದಿನಾಂಕ : 15–11–2010 & 22–12–2010.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿನ ಸರ್ಕಾರಿ ಆದೇಶದಲ್ಲಿ ಬೆಂಗಳೂರು ನಗರ ಜಿಲ್ಲೆಯ ಉಪ ನಿಬಂಧಕರ ಒಂದು ಕಛೇರಿಯನ್ನು ಆಡಳಿತಾತ್ಮಕ ಹಿತದೃಷ್ಟಿಯಿಂದ ಸಹಕಾರ ಸಂಘಗಳ ಉಪ ನಿಬಂಧಕರು–1 ಮತ್ತು ಸಹಕಾರ ಸಂಘಗಳ ಉಪ ನಿಬಂಧಕರು–2 ಎಂದು ಎರಡು ಪ್ರತ್ಯೇಕ ಕಛೇರಿಗಳನ್ನಾಗಿ ವಿಂಗಡಿಸಲಾಗಿದೆ.

ಮೇಲೆ ಓದಲಾದ (2)ರಲ್ಲಿನ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರಡಿ ನೋಂದಣಿಯಾಗಿರುವ ಸಂಘ/ಸಂಸ್ಥೆಗಳ ಕಾರ್ಯನಿರ್ವಹಣೆಯನ್ನು ಕಂದಾಯ ಇಲಾಖೆಯಿಂದ ಸಹಕಾರ ಇಲಾಖೆಗೆ ದಿನಾಂಕ : 01–06–2008 ರಿಂದ ಅನ್ವಯವಾಗುವಂತೆ ವರ್ಗಾವಣೆ ಮಾಡಲಾಗಿರುತ್ತದೆ.

ಮೇಲೆ ಓದಲಾದ (3)ರಲ್ಲಿನ ಸರ್ಕಾರಿ ಆದೇಶದಲ್ಲಿ ಕರ್ನಾಟಕದಲ್ಲಿ ಸಂಘ/ಸಂಸ್ಥೆಗಳ ಕಾರ್ಯನಿರ್ವಹಣೆಯನ್ನು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರಡಿ ಆಯಾ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರುಗಳಿಗೆ (ಬೆಂಗಳೂರು ನಗರ ಜಿಲ್ಲೆಯನ್ನು ಹೊರತುಪಡಿಸಿ) ನೋಂದಣಾಧಿಕಾರಿಗಳಾಗಿ ಕಾರ್ಯನಿರ್ವಹಿಸಲು ಅಧಿಕಾರವನ್ನು ಪ್ರತ್ಯಾಯೋಜಿಸಲಾಗಿರುತ್ತದೆ.

ಮೇಲೆ ಓದಲಾದ (4)ರಲ್ಲಿನ ಸಹಕಾರ ಸಂಘಗಳ ನಿಬಂಧಕರ ಪತ್ರದಲ್ಲಿ ಬೆಂಗಳೂರು ನಗರ ಜಿಲ್ಲೆಗೆ ಸಂಬಂಧಿಸಿದಂತೆ ಸಂಘ/ಸಂಸ್ಥೆಗಳ ಕಾರ್ಯನಿರ್ವಹಣೆಯ ಅಧಿಕಾರವನ್ನು ಸಹಕಾರ ಸಂಘಗಳ ಉಪ ನಿಬಂಧಕರು (ಕಾನೂನು ಕೋಶ) ಇವರಿಗೆ ಪ್ರತ್ಯಾಯೋಜಿಸಲಾಗಿದ್ದು, ಬೆಂಗಳೂರು ಜಿಲ್ಲೆಯಲ್ಲಿರುವ ಸುಮಾರು 42000 ಸಂಘ/ಸಂಸ್ಥೆಗಳ ಕಾರ್ಯನಿರ್ವಹಣೆಯನ್ನು ಹಿಂದೆ ಕಂದಾಯ ಇಲಾಖೆಯ 5 ಜಿಲ್ಲಾ ನೋಂದಣಾಧಿಕಾರಿಗಳ ಕಛೇರಿಗಳು ಕಾರ್ಯನಿರ್ವಹಿಸಿದ್ದು ಈ ಕಾರ್ಯವನ್ನು ಪ್ರಸ್ತುತ ಸಹಕಾರ ಸಂಘಗಳ ಉಪ ನಿಬಂಧಕರು (ಕಾನೂನು ಕೋಶ) ಇವರು ಒಬ್ಬರೇ ಸಂಪೂರ್ಣವಾಗಿ ನಿರ್ವಹಿಸಲು ಸಾಧ್ಯವಾಗದಿರುವುದರಿಂದ ಸರ್ಕಾರದ ಖಾತೆಗೆ ಸಂದಾಯವಾಗಬೇಕಾಗಿರುವ ವಿವಿಧ ರೀತಿಯ ಶುಲ್ಕಗಳು ಕಡಿಮೆಯಾಗಿ ಸರ್ಕಾರದ ಆದಾಯದಲ್ಲಿ ಕುಂಠಿತವಾಗಿರುವುದಾಗಿ ತಿಳಿಸಿ, ಬೆಂಗಳೂರು ನಗರ ಜಿಲ್ಲೆಗೆ ಸಂಬಂಧಿಸಿದಂತೆ ಈ ಕಾಯ್ದೆ ಹಾಗೂ ಇತರೆ ಕಾಯ್ದೆ/ನಿಯಮಗಳನ್ವಯ ಕಾರ್ಯನಿರ್ವಹಣೆಯನ್ನು ಈ ಕೆಳಗೆ ಸೂಚಿಸಿರುವಂತೆ ಸಹಕಾರ ಸಂಘಗಳ ಉಪ ನಿಬಂಧಕರ ಹುದ್ದೆಗಳನ್ನು ಮರುಪದನಾಮೀಕರಿಸಿ ವಹಿಸುವ ಬಗ್ಗೆ ಆಡಳಿತಾತ್ಮಕ ಮಂಜೂರಾತಿಯನ್ನು ನೀಡುವಂತೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

| ಕ್ರ.ಸ. | ಪ್ರಸ್ತುತ ಹುದ್ದೆಯ ವಿವರ | ಮಾರ್ಪಡಿಸುವ ಹುದ್ದೆಯ ವಿವರ | ನಿರ್ವಹಿಸಬೇಕಾದ ಕಾಯ್ದೆ ಮತ್ತು ನಿಯಮಗಳು |
|---|---|---|---|
| 1 | ಸಹಕಾರ ಸಂಘಗಳ ಉಪ ನಿಬಂಧಕರು–1 | ಸಹಕಾರ ಸಂಘಗಳ ಉಪ ನಿಬಂಧಕರು–ಉತ್ತರ ಜಿಲ್ಲೆ | 1. ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಮತ್ತು ನಿಯಮಗಳು 1960<br>2. ಕರ್ನಾಟಕ ಲೇವಾದೇವಿ ಕಾಯ್ದೆ 1961 & ನಿಯಮಗಳು 1965.<br>3. ಕರ್ನಾಟಕ ಗಿರವಿ ಕಾಯ್ದೆ 1961 & ನಿಯಮಗಳು 1966.<br>4. ಚಿಟ್ ಫಂಡ್ ಕಾಯ್ದೆ 1982 & ನಿಯಮಗಳು 1983.<br>5. ಕರ್ನಾಟಕ ಸಂಘಗಳ ಕಾಯ್ದೆ 1960 ಮತ್ತು ನಿಯಮಗಳು 1961.<br>6. ಕರ್ನಾಟಕ ಸೌಹಾರ್ದ ಸಹಕಾರಿ ಅಧಿನಿಯಮ 1997 & ಕರ್ನಾಟಕ ಸೌಹಾರ್ದ ಸಹಕಾರಿ ನಿಯಮಗಳು 2004. |
| 2 | ಸಹಕಾರ ಸಂಘಗಳ ಉಪ ನಿಬಂಧಕರು–2 | ಸಹಕಾರ ಸಂಘಗಳ ಉಪ ನಿಬಂಧಕರು–ದಕ್ಷಿಣ ಜಿಲ್ಲೆ | |
| 3 | ಸಹಕಾರ ಸಂಘಗಳ ಉಪ ನಿಬಂಧಕರು (ಕಾನೂನು ಕೋಶ) | ಸಹಕಾರ ಸಂಘಗಳ ಉಪ ನಿಬಂಧಕರು–ಕೇಂದ್ರ ಜಿಲ್ಲೆ | |

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಹಿಂದೆ ಉಲ್ಲೇಖ (5)ರಂತೆ ಸರ್ಕಾರ ಆದೇಶವನ್ನು ಹೊರಡಿಸಲಾಗಿತ್ತು. ಆದರೆ ಸಹಕಾರ ಸಂಘಗಳ ನಿಬಂಧಕರು ಸರ್ಕಾರಕ್ಕೆ ಪರಿಷ್ಕೃತ ಪ್ರಸ್ತಾವನೆಯನ್ನು ಉಲ್ಲೇಖ (6) ರಲ್ಲಿ ಕಳುಹಿಸಿದ್ದು, ಅದರಂತೆ, ಬೆಂಗಳೂರು ಜಿಲ್ಲೆಯ ವಿವಿಧ ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿಗಳ ವೃಂದ ಬಲವನ್ನು ಮುಂದುವರಿಸಿ/ಸ್ಥಳಾಂತರಗೊಳಿಸಿ ನಿಗದಿಪಡಿಸಬೇಕಾಗಿದೆ.

ಬೆಂಗಳೂರು ನಗರ ಜಿಲ್ಲೆಯಲ್ಲಿರುವ ಒಟ್ಟು 28 ವಿಧಾನ ಸಭಾ ಕ್ಷೇತ್ರಗಳ ವ್ಯಾಪ್ತಿಯನ್ನು ಪ್ರತಿ ಸಹಕಾರ ಸಂಘಗಳ ಉಪ ನಿಬಂಧಕರುಗಳಿಗೆ ಹಾಗೂ ಆಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರುಗಳಿಗೆ ಹಂಚಿಕೆಯನ್ನು ಮಾಡಲಾಗಿದೆ ಮತ್ತು ಇದಕ್ಕೆ ಸಂಬಂಧಿಸಿದ ವಿಧಾನ ಸಭಾ ಕ್ಷೇತ್ರಗಳ ಹೆಸರುಗಳ ಪಟ್ಟಿಯನ್ನು ಅನುಬಂಧ–5 ರಲ್ಲಿ ಲಗತ್ತಿಸಲಾಗಿದೆ.

ಈ ಮೇಲಿನ ಕಂಡಿಕೆಗಳಲ್ಲಿ ಪ್ರಸ್ತಾಪಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಉಲ್ಲೇಖ (5)ರಲ್ಲಿ ಈಗಾಗಲೇ ಹೊರಡಿಸಿರುವ ಆದೇಶವನ್ನು ಮಾರ್ಪಡಿಸಿ, ಈ ಕೆಳಗೆ ವಿವರಿಸಿರುವಂತೆ ಪರಿಷ್ಕೃತ ಆದೇಶ ಹೊರಡಿಸಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 302 ಎಸಸೇ 2010, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಬೆಂಗಳೂರು ನಗರ ಜಿಲ್ಲೆಗೆ ಸಂಬಂಧಿಸಿದಂತೆ ಸಹಕಾರ ಸಂಘಗಳ ಉಪನಿಬಂಧಕರುಗಳ ಮತ್ತು ಸಹಕಾರ ಸಂಘಗಳ ಸಹಾಯಕ ನಿಬಂಧಕರುಗಳ ಹುದ್ದೆಗಳನ್ನು ಈ ಕೆಳಗಿನಂತೆ ಮರುಪದನಾಮೀಕರಿಸಿದೆ.

| ಕ್ರ. ಸಂ. | ಪ್ರಸ್ತುತ ಹುದ್ದೆಯ ವಿವರ | ಹೊಸದಾಗಿ ಪದನಾಮೀಕರಿಸಿರುವ ಹುದ್ದೆಯ ವಿವರ | ಸಿಬ್ಬಂದಿಗಳ/ವ್ಯಾಪ್ತಿಯ ಹಂಚಿಕೆ |
|---|---|---|---|
| 1. | ಸಹಕಾರ ಸಂಘಗಳ ಉಪ ನಿಬಂಧಕರು ಬೆಂಗಳೂರು–1 ಬೆಂಗಳೂರು ನಗರ ಜಿಲ್ಲೆ | ಸಹಕಾರ ಸಂಘಗಳ ಉಪ ನಿಬಂಧಕರು, ಉತ್ತರ ವಲಯ ಬೆಂಗಳೂರು ನಗರ ಜಿಲ್ಲೆ. | ವಿವರಗಳನ್ನು ಅನುಬಂಧ–1 ರಲ್ಲಿ ನೀಡಲಾಗಿದೆ. |
| 2 | ಸಹಕಾರ ಸಂಘಗಳ ಸಹಾಯಕ ನಿಬಂಧಕರು (ಲೇವಾದೇವಿ) ಬೆಂಗಳೂರು ನಗರ ಜಿಲ್ಲೆ | ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಉತ್ತರ ವಲಯ ವೃತ್ತ, ಬೆಂಗಳೂರು ನಗರ ಜಿಲ್ಲೆ. | ವಿವರಗಳನ್ನು ಅನುಬಂಧ–1(ಅ) ರಲ್ಲಿ ನೀಡಲಾಗಿದೆ. |
| 3 | ಸಹಕಾರ ಸಂಘಗಳ ಉಪ ನಿಬಂಧಕರು ಬೆಂಗಳೂರು–2 ಬೆಂಗಳೂರು ನಗರ ಜಿಲ್ಲೆ | ಸಹಕಾರ ಸಂಘಗಳ ಉಪ ನಿಬಂಧಕರು, ಕೇಂದ್ರ ವಲಯ ಬೆಂಗಳೂರು ನಗರ ಜಿಲ್ಲೆ. | ವಿವರಗಳನ್ನು ಅನುಬಂಧ–2 ರಲ್ಲಿ ನೀಡಲಾಗಿದೆ. |
| 4 | ಸಹಕಾರ ಸಂಘಗಳ ಸಹಾಯಕ ನಿಬಂಧಕರು 2ನೇ ವಲಯ, ಬೆಂಗಳೂರು, ಬೆಂಗಳೂರು ನಗರ ಜಿಲ್ಲೆ | ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೇಂದ್ರ ವಲಯ ವೃತ್ತ, ಬೆಂಗಳೂರು ನಗರ ಜಿಲ್ಲೆ. | ವಿವರಗಳನ್ನು ಅನುಬಂಧ–2(ಅ) ರಲ್ಲಿ ನೀಡಲಾಗಿದೆ. |
| 5 | ಸಹಕಾರ ಸಂಘಗಳ ಉಪ ನಿಬಂಧಕರು (ಕಾನೂನು ಕೋಶ) ಕೇಂದ್ರ ಕಛೇರಿ, ಬೆಂಗಳೂರು, ಬೆಂಗಳೂರು ನಗರ ಜಿಲ್ಲೆ | ಸಹಕಾರ ಸಂಘಗಳ ಉಪ ನಿಬಂಧಕರು, ದಕ್ಷಿಣ ವಲಯ ಬೆಂಗಳೂರು ನಗರ ಜಿಲ್ಲೆ. | ವಿವರಗಳನ್ನು ಅನುಬಂಧ–3 ರಲ್ಲಿ ನೀಡಲಾಗಿದೆ. |
| 6 | ಸಹಕಾರ ಸಂಘಗಳ ಸಹಾಯಕ ನಿಬಂಧಕರು 1ನೇ ವಲಯ, ಬೆಂಗಳೂರು ನಗರ ಜಿಲ್ಲೆ | ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಕ್ಷಿಣ ವಲಯ ವೃತ್ತ, ಬೆಂಗಳೂರು ನಗರ ಜಿಲ್ಲೆ. | ವಿವರಗಳನ್ನು ಅನುಬಂಧ–3(ಅ) ರಲ್ಲಿ ನೀಡಲಾಗಿದೆ. |
| 7 | ಸಹಕಾರ ಸಂಘಗಳ ಸಹಾಯಕ ನಿಬಂಧಕರು 3ನೇ ವಲಯ, ಬೆಂಗಳೂರು ನಗರ ಜಿಲ್ಲೆ | ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಂಘ ಸಂಸ್ಥೆಗಳ ಕಾರ್ಯನಿರ್ವಹಣಾ ಶಾಖೆ, ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು | ––– |
| 8 | ಹೆಚ್ಚುವರಿ ಸಿಬ್ಬಂದಿಯ ಸ್ಥಳಾಂತರ | –––– | ವಿವರಗಳನ್ನು ಅನುಬಂಧ–4 ರಲ್ಲಿ ನೀಡಲಾಗಿದೆ. |
| 9 | ಸಹಕಾರ ಸಂಘಗಳ ಉಪನಿಬಂಧಕರು & ಸಹಾಯಕ ನಿಬಂಧಕರುಗಳಿಗೆ ಹಂಚಿಕೆ ಮಾಡಲಾದ ಅಧಿಕಾರ ವ್ಯಾಪ್ತಿಯ ವಿವರಗಳು | –––– | ವಿವರಗಳನ್ನು ಅನುಬಂಧ–5 ರಲ್ಲಿ ನೀಡಲಾಗಿದೆ. |

ಹೊಸದಾಗಿ ಪದನಾಮೀಕರಿಸಿರುವ ಅಧಿಕಾರಿಗಳು ಈ ಕೆಳಕಂಡ ಕಾಯ್ದೆ & ನಿಯಮಗಳನ್ವಯ ಕಾರ್ಯನಿರ್ವಹಿಸಲು ಆಡಳಿತಾತ್ಮಕ ಮಂಜೂರಾತಿಯನ್ನು ನೀಡಲಾಗಿದೆ.

1. ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಮತ್ತು ನಿಯಮಗಳು 1960.
2. ಕರ್ನಾಟಕ ಲೇವಾದೇವಿ ಕಾಯ್ದೆ 1961 & ನಿಯಮಗಳು 1965.
3. ಕರ್ನಾಟಕ ಗಿರವಿ ಕಾಯ್ದೆ 1961 & ನಿಯಮಗಳು 1966.
4. ಚಿಟ್ ಫಂಡ್ ಕಾಯ್ದೆ 1982 & ನಿಯಮಗಳು 1983.
5. ಕರ್ನಾಟಕ ಸಂಘಗಳ ಕಾಯ್ದೆ 1960 ಮತ್ತು ನಿಯಮಗಳು 1961.
6. ಕರ್ನಾಟಕ ಸೌಹಾರ್ದ ಸಹಕಾರಿ ಅಧಿನಿಯಮ 1997 & ಕರ್ನಾಟಕ ಸೌಹಾರ್ದ ಸಹಕಾರಿ ನಿಯಮಗಳು 2004.

ಮೇಲ್ಕಂಡ ಅಧಿಕಾರಿಗಳಿಗೆ ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧ–5 ರಲ್ಲಿ ವಿಧಾನಸಭಾ ಕ್ಷೇತ್ರವಾರು ಕಾರ್ಯವ್ಯಾಪ್ತಿ ನಿಗಧಿಪಡಿಸಲಾಗಿದೆ. ಇವರುಗಳು ಇಲಾಖೆಯಲ್ಲಿ ನಿರ್ವಹಿಸುತ್ತಿರುವ ವಿವಿಧ ಕಾಯ್ದೆ ಮತ್ತು ನಿಯಮಗಳ ನಿರ್ದಿಷ್ಟವಾದ ಅಧಿಕಾರ ಪ್ರತ್ಯಾಯೋಜನೆಯ ಬಗ್ಗೆ ಪ್ರತ್ಯೇಕ ಆದೇಶವನ್ನು ಹೊರಡಿಸಲಾಗುವುದು.

ಹೊಸದಾಗಿ ಪದನಾಮೀಕರಿಸಿರುವ ಅಧಿಕಾರಿಗಳು ಮತ್ತು ಸ್ಥಳಾಂತರಗೊಂಡಿರುವ ಸಿಬ್ಬಂದಿಗಳು ಮುಂದಿನ ಆದೇಶದವರೆಗೆ ಅನುಬಂಧಗಳಲ್ಲಿ ಸೂಚಿಸಿರುವ ಸ್ಥಳಗಳಲ್ಲಿ ಮುಂದಿನ ಆದೇಶದವರೆಗೆ ಮುಂದುವರೆಯತಕ್ಕದ್ದು.

ಈ ಆದೇಶವು ದಿನಾಂಕ : 01–04–2011 ರಿಂದ ಜಾರಿಗೆ ಬರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಮಿತಾ ಪ್ರಸಾದ್**

ಸರ್ಕಾರದ ಪ್ರಧಾನ ಕಾರ್ಯದರ್ಶಿ

ಸಹಕಾರ ಇಲಾಖೆ

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ ಹಾಗೂ ತಾಲ್ಲೂಕಿನ ಹಿರೇಕಾಸನಖಂಡಿ ಕೆರೆಯನ್ನು ಕುಡಿಯುವ ನೀರಿನ ಯೋಜನೆಗಾಗಿ ಉಪಯೋಗಿಸಿಕೊಳ್ಳುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರಸಂಖ್ಯೆ: ಮುಇಂ/ಸನೀ(ಉ)ವ/ತಾ.ಸ/3/ಸ.ಇಂ-7/ಹಿರೇಕಾಸನಖಂಡಿ ಕೆರೆ/2010-11 / 5153 ದಿನಾಂಕ: 13.09.2010.

**ಪ್ರಸ್ತಾವನೆ:**

ಕೊಪ್ಪಳ ತಾಲ್ಲೂಕಿನ ಮುಂಡರಗಿ ಹಾಗೂ ಇತರೆ 84 ಹಳ್ಳಿಗಳಲ್ಲಿ ಕುಡಿಯುವ ನೀರಿನ ಪೂರೈಕೆ ಕಾಮಗಾರಿಯನ್ನು ರಾಜೀವ್ ಗಾಂಧಿ ಸಬ್ ಮಿಷನ್ ಅಡಿಯಲ್ಲಿ ಕೈಗೊಳ್ಳಲು ಯೋಜಿಸಲಾಗಿದೆ. ನೀರನ್ನು ತುಂಗಭದ್ರಾ ಜಲಾಶಯದಿಂದ ಪಡೆದು ಇಂಪೌಂಡಿಂಗ್ ರಿಸರ್ವಾಯರ್‌ವರೆಗೆ ಪಂಪು ಮಾಡಿ ನಂತರ ಶುದ್ಧೀಕರಿಸಿ ಮೇಲ್ಮಟ್ಟದ ಜಲಾಗಾರದ ಮೂಲಕ ಕೊಪ್ಪಳ ತಾಲ್ಲೂಕಿನ 84 ಹಳ್ಳಿಗಳಿಗೆ ನೀರು ಪೂರೈಸಲು ಹಿರೇಕಾಸನಖಂಡಿ ಕೆರೆಯನ್ನು ಇಂಪೌಂಡಿಂಗ್ ರಿಸರ್ವಾಯರ್‌ಗಾಗಿ ಬಳಸಿಕೊಳ್ಳಲು ಅನುಮತಿಯನ್ನು ನೀಡುವಂತೆ ಮೇಲೆ ಓದಲಾದ ದಿನಾಂಕ: 13.09.2010ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಕೋರಿರುತ್ತಾರೆ.

ರಾಷ್ಟ್ರೀಯ ಜಲನೀತಿಯಂತೆ ಕುಡಿಯುವ ನೀರು ಬಳಕೆಗೆ ಆದ್ಯತೆ ನೀಡುವ ಅವಶ್ಯಕತೆ ಇರುವುದರಿಂದ ಮುಖ್ಯ ಇಂಜಿನಿಯರ್ ರವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸನೀಇ 200 ಮಸಾವಿ 2010, ಬೆಂಗಳೂರು, ದಿನಾಂಕ 11-04-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕೊಪ್ಪಳ ಜಿಲ್ಲೆ ಹಾಗೂ ತಾಲ್ಲೂಕಿನ ಹಿರೇಕಾಸನಖಂಡಿ ಕೆರೆಯನ್ನು ಕುಡಿಯುವ ನೀರಿನ ಯೋಜನೆಗಾಗಿ ಬಳಸಿಕೊಳ್ಳಲು ಸಹಾಯಕ ಕಾರ್ಯಪಾಲಕ ಅಭಿಯಂತರರು ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗ ಕೊಪ್ಪಳ ಇವರಿಗೆ ಈ ಕೆಳಕಂಡ ನಿಬಂಧನೆಗೊಳಪಟ್ಟು ಅನುಮತಿ ನೀಡಲಾಗಿದೆ.

1. ಕೆರೆಯಲ್ಲಿ ಕನಿಷ್ಠ ಮಟ್ಟದವರೆಗೆ ನೀರು ಶೇಖರಣೆಯಾಗುವವರೆಗೆ ಕೆರೆಯಿಂದ ನೀರನ್ನು ಬಳಸಬಾರದು;
2. ಕೊಪ್ಪಳ ಜಿಲ್ಲೆ ಹಾಗೂ ತಾಲ್ಲೂಕಿನ ಹಿರೇಕಾಸನಖಂಡಿ ಕೆರೆಯನ್ನು ಕುಡಿಯುವ ನೀರಿನ ಯೋಜನೆಗಾಗಿ ಉಪಯೋಗಿಸಿಕೊಳ್ಳುವ ಸಲುವಾಗಿ ನೀರಿನ ಪ್ರಮಾಣವನ್ನು ಅಳತೆ ಮಾಡಿ ಒಂದು ರಿಜಿಸ್ಟರ್‌ನಲ್ಲಿ ದಾಖಲಿಸುವುದು.
3. ನೀರು ಸರಬರಾಜು ಯೋಜನೆಯ ನೀಲಿ ನಕಾಶೆಯನ್ನು ಪಡೆದು ಸಣ್ಣ ನೀರಾವರಿ ಇಲಾಖೆಯಲ್ಲಿ ದಾಖಲಿಸುವುದು;
4. ಮೇಲೆ ತಿಳಿಸಿರುವ ಎಲ್ಲಾ ನಿಬಂಧನೆಗಳನ್ನೊಳಗೊಂಡ ಒಂದು ತಿಳುವಳಿಕೆ ಪತ್ರವನ್ನು ತಯಾರಿಸಿ ಅದಕ್ಕೆ ಸಂಬಂಧಪಟ್ಟ ಸಹಾಯಕ ಕಾರ್ಯಪಾಲಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗ, ಕೊಪ್ಪಳ ಮತ್ತು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ ರವರು ಜಂಟಿ ಸಹಿ ಮಾಡಿ ಅದರ ಮೂಲಕ ಪ್ರತಿಯನ್ನು ಸಣ್ಣ ನೀರಾವರಿ ಇಲಾಖೆಯಲ್ಲಿ ದಾಖಲಿಸುವುದು;
5. ಕೆರೆಯ ವಾರ್ಷಿಕ ನಿರ್ವಹಣೆಗೆ ತಗಲುವ ಶೇಕಡ 25ರಷ್ಟು ವೆಚ್ಚವನ್ನು ಸಹಾಯಕ ಕಾರ್ಯಪಾಲಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗ, ಕೊಪ್ಪಳ ರವರು ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಪಿ.ಆರ್. 1111

ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆ, ಬಳ್ಳಾರಿ ತಾಲ್ಲೂಕು, ಕೋಳೂರು ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಟೆಂಡರ್ ಕುರಿತು.

**ಓದಲಾಗಿದೆ :** 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ: ಮಇಂ/ಸನೀ(ಉ)ವ/ಬಿಜೆಪಿ/ಪಿಬಿ-12/2010-11/1975 ದಿನಾಂಕ 06-04-2011.

2) ಸರ್ಕಾರದ ಆದೇಶ ಸಂಖ್ಯೆ: ಸನೀಇ 02 ನಯೋಕಾ 2009, ದಿನಾಂಕ: 05-02-2009.

**ಪ್ರಸ್ತಾವನೆ:**

ಬಳ್ಳಾರಿ ಜಿಲ್ಲೆ, ಬಳ್ಳಾರಿ ತಾಲ್ಲೂಕು, ಕೋಳೂರು ಗ್ರಾಮದ ಹತ್ತಿರ ಏತನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಳ್ಳಾರಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 29.11.2010 |
| ಪ್ರಜಾವಾಣಿ ದಿನ ಪತ್ರಿಕೆ | 27.11.2010 |
| ಇಂಡಿಯನ್ ಎಕ್ಸ್‌ಪ್ರೆಸ್ | 29.11.2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಐದು ಜನ ಗುತ್ತಿಗೆದಾರರು ಇ–ಪ್ರೊಕ್ಯೂರ್‌ಮೆಂಟ್ ಮುಖಾಂತರ ಟೆಂಡರ್ ದಾಖಲಾತಿಗಳನ್ನು ಡೌನ್ ಲೋಡ್ ಮಾಡಿಕೊಂಡು ಇ–ಪ್ರೊಕ್ಯೂರ್‌ಮೆಂಟ್ ಮುಖಾಂತರ ದ್ವಿಲಕೋಟೆ ಪದ್ಧತಿಯಲ್ಲಿ ಟೆಂಡರ್‌ಗಳನ್ನು ಸಲ್ಲಿಸಿರುವುದಾಗಿ ವರದಿಯಾಗಿದೆ. ತಾಂತ್ರಿಕ ಬಿಡ್‌ಗಳನ್ನು ದಿನಾಂಕ 13.01.2011 ರಂದು ತೆರೆಯಲಾಗಿದ್ದು ಸದರಿ ಗುತ್ತಿಗೆದಾರರ ಪೈಕಿ ಇಬ್ಬರು ಗುತ್ತಿಗೆದಾರರ ಟೆಂಡರ್ ಕ್ರಮಬದ್ಧವಾದ ಕಾರಣ ಇವರ ಆರ್ಥಿಕ ಬಿಡ್‌ಗಳನ್ನು ತೆರೆದು ಪರಿಶೀಲಿಸಲಾಗಿದೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 3,17,67,244/– |
| 2010–11ನೇ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಂತೆ ಪರಿಷ್ಕೃತ ಟೆಂಡರಿಗೆ ಇಡಲಾದ ಮೊತ್ತ | ರೂ. 3,91,29,392/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕೃತ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ಕೆ. ದೊಡ್ಡ ಹನುಮಂತಪ್ಪ, 1ನೇ ದರ್ಜೆ ಗುತ್ತಿಗೆದಾರರು, ಹೊಸಪೇಟೆ | 4,62,85,855/– | 45.70 ಹೆಚ್ಚು | 18.29 ಹೆಚ್ಚು |
| 2 | ಟಿ.ವಿ. ಸುಧೀರ್ ಮೋಹನ್, 1ನೇ ದರ್ಜೆ ಗುತ್ತಿಗೆದಾರರು, | 5,64,92,939/– | 77.83 ಹೆಚ್ಚು | 44.37 ಹೆಚ್ಚು |

ಮೇಲ್ಕಂಡಂತೆ ಶ್ರೀ ಕೆ. ದೊಡ್ಡ ಹನುಮಂತಪ್ಪ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಕಡಿಮೆ ದರಗಳನ್ನು ನಮೂದಿಸಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 18.29 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ: 12/04/2011 ರಂದು ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ. 10.00 ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಯನ್ನು ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 3,91,29,392/–ಗಳ ಮೇಲೆ ಶೇ. 8.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 4,22,59,743/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸನೀಇ 13 ಏನೀಯೋ 2011(ತಾಂತ್ರಿಕ) ಬೆಂಗಳೂರು, ದಿನಾಂಕ 13ನೇ ಏಪ್ರಿಲ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆ, ಬಳ್ಳಾರಿ ತಾಲ್ಲೂಕು, ಕೋಳೂರು ಗ್ರಾಮದ ಹತ್ತಿರ ಏತನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 3,91,29,392/–ಗಳ ಮೇಲೆ ಶೇ. 8.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 4,22,59,743/– ಗಳಿಗೆ (ರೂ. ನಾಲ್ಕು ಕೋಟಿ ಇಪ್ಪತ್ತೆರಡು ಲಕ್ಷ ಐವತ್ತೊಂಬತ್ತು ಸಾವಿರದ ಏಳು ನೂರ ನಲವತ್ತು ಮೂರು) ಶ್ರೀ ಕೆ. ದೊಡ್ಡಹನುಮಂತಪ್ಪ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪಿ.ಆರ್. 1112

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆಯ ಗೋಕಾಕ್ ತಾಲ್ಲೂಕಿನ ಹಿರೇನಂದಿ ಗ್ರಾಮದ ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಕುರಿತು.

**ಓದಲಾಗಿದೆ :** 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವ/ಬಿಜೆಪಿ/ಎಇ–1/2010–11/1084 ದಿನಾಂಕ 28–02–2011.

2) ಸರ್ಕಾರದ ಆದೇಶ ಸಂಖ್ಯೆ ಸನೀಇ 06 ನಯೋಕಾ 2009, ದಿನಾಂಕ: 06–01–2010.

**ಪ್ರಸ್ತಾವನೆ:**

ಬೆಳಗಾವಿ ಜಿಲ್ಲೆಯ ಗೋಕಾಕ್ ತಾಲ್ಲೂಕಿನ ಹಿರೇನಂದಿ ಗ್ರಾಮದ ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 11.10.2010 |
| ಸಂಯುಕ್ತ ಕರ್ನಾಟಕ/ಪ್ರಜಾವಾಣಿ ದಿನ ಪತ್ರಿಕೆಗಳು | 16.10.2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಮೂರು ಜನ ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 07.01.2010 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 91,12,641/- |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಟೆಂಡರಿಗೆ ಇಡಲಾದ ಮೊತ್ತ | ರೂ. 1,06,71,303/- |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ ಹಾಗೂ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ಎ.ಎಸ್. ಸವಸುದ್ದಿ, ಗುತ್ತಿಗೆದಾರರು | 1,23,87,026/- | 35.93 ಹೆಚ್ಚು | 16.08 ಹೆಚ್ಚು |

ಮೇಲ್ಕಂಡಂತೆ ಶ್ರೀ ಎ.ಎಸ್. ಸವಸುದ್ದಿ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 16.08 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ: 29/03/2011ರಂದು ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ. 14 ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಯನ್ನು ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,06,71,303/-ಗಳ ಮೇಲೆ ಶೇ. 6.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,13,11,581/-ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸನೀಇ 10 ಅಪಿಬಂ 2011(ತಾಂತ್ರಿಕ) ಬೆಂಗಳೂರು, ದಿನಾಂಕ 18ನೇ ಏಪ್ರಿಲ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆಯ ಗೋಕಾಕ ತಾಲ್ಲೂಕಿನ ಹಿರೇನಂದಿ ಗ್ರಾಮದ ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,06,71,303/-ಗಳ ಮೇಲೆ ಶೇ. 6.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,13,11,581/- ಗಳಿಗೆ (ರೂ. ಒಂದು ಕೋಟಿ ಹದಿಮೂರು ಲಕ್ಷ ಹನ್ನೊಂದು ಸಾವಿರದ ಐದು ನೂರ ಎಂಭತ್ತೊಂದು) ಶ್ರೀ ಎ.ಎಸ್. ಸವಸುದ್ದಿ, ಒಂದನೇ ದರ್ಜೆ ಗುತ್ತಿಗೆದಾರರು ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪಿ.ಆರ್. 1113

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಇಂಧನ ಸಚಿವಾಲಯ

**ವಿಷಯ :** ಮೆ॥ ಭಾಲ್ಕೇಶ್ವರ ಶುಗರ್ಸ್ ಲಿಮಿಟೆಡ್ ಇವರಿಗೆ 14 ಮೆಗಾ ವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: CI 60 SPI 2010 ದಿನಾಂಕ: 17.2.2010.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/04/ಬಿಎಸ್ಎಲ್/11/902 ದಿನಾಂಕ: 17/21.3.2011.

**ಪ್ರಸ್ತಾವನೆ:**

ದಿನಾಂಕ 05.1.2010ರಂದು ನಡೆದ ಎಸ್.ಹೆಚ್.ಎಲ್.ಸಿ.ಸಿ.ಯ 20ನೇ ಸಭೆಯಲ್ಲಿನ ಶಿಫಾರಸ್ಸಿನನ್ವಯ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯು ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ॥ ಭಾಲ್ಕೇಶ್ವರ ಶುಗರ್ಸ್ ಲಿಮಿಟೆಡ್ ರವರ ಬೀದರ್ ಜಿಲ್ಲೆಯ ಭಾಲ್ಕಿ ತಾಲ್ಲೂಕಿನ Bajolga ಗ್ರಾಮದಲ್ಲಿರುವ sugar plant ಸಾಮರ್ಥ್ಯವನ್ನು 2500 TCD ಯಿಂದ 5000ಕ್ಕೆ ಹಾಗೂ ಸಹ ವಿದ್ಯುತ್ ಘಟಕದ ಸಾಮರ್ಥ್ಯವನ್ನು 14 ಮೆ.ವ್ಯಾ. ರಿಂದ 307 ಮೆ.ವ್ಯಾಗೆ ಹೆಚ್ಚಿಸಲು ಹಾಗೂ 60 KLPD Distillary ಸ್ಥಾಪಿಸಲು ಅನುಮೋದನೆಯನ್ನು ನೀಡಿರುತ್ತಾರೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತರವರು ಮೇಲೆ ಓದಲಾದ (2)ರ ಪತ್ರದಲ್ಲಿ ಮೆ॥ ಭಾಲ್ಕೇಶ್ವರ ಶುಗರ್ಸ್ ಲಿಮಿಟೆಡ್ ಇವರಿಗೆ ಬೀದರ್ ಜಿಲ್ಲೆಯ ಭಾಲ್ಕಿ ತಾಲ್ಲೂಕಿನ Bajolga ಗ್ರಾಮದಲ್ಲಿ 14 MW (Gross) ಮತ್ತು 10 MW (exportable) ಸಾಮರ್ಥ್ಯದ ಸಹ ವಿದ್ಯುತ್ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡುವಂತೆ ಸರ್ಕಾರಕ್ಕೆ ಶಿಫಾರಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 451 ಎನ್‌ಸಿಇ 2010, ಬೆಂಗಳೂರು, ದಿನಾಂಕ 12.04.2011**

ಮೆ॥ ಭಾಲ್ಕೇಶ್ವರ ಶುಗರ್ಸ್ ಲಿಮಿಟೆಡ್ ಇವರಿಗೆ ಬೀದರ್ ಜಿಲ್ಲೆಯ ಭಾಲ್ಕಿ ತಾಲ್ಲೂಕಿನ Bajolga ಗ್ರಾಮದಲ್ಲಿ 14 MW (Gross) ಮತ್ತು 10 MW (exportable) ಸಾಮರ್ಥ್ಯದ ಸಹ ವಿದ್ಯುತ್ ಘಟಕವನ್ನು ಸ್ಥಾಪಿಸಲು ಈ ಕೆಳಗಿನ ನಿಬಂಧನೆಗೊಳಪಟ್ಟು ಸರ್ಕಾರದ ನಿರಾಕ್ಷೇಪಣೆಯನ್ನು ನೀಡಲಾಗಿದೆ.

1. The company shall obtain separate clearance from Karnataka Power Transmission Corporation Limited in respect of evacuation of power.
2. The company shall enter into PPA/Wheeling and Banking agreement with Karnataka Power Transmission Corporation Limited/concerned ESCOM in case of selling power to third partl and power purchase agreement in case of selling power to Karnataka Power Transmission Corporation Limited.
3. The company shall obtain necessary statutory clearance wherever required from the respective Departments/Organizations such as Forest Department, Revenue Department, & Karnataka State Pollution Control Board, etc. for both the Sugar Mill and the Power plant.
4. The Detailed Project Report (D.P.R.) for the power plant shall be got approved by Karnataka Renewable Energy Development Limited, before the commencement of the power plant.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 1114

## ENERGY SECRETARIAT

**Sub :** Extension of time for submission of report by Hon'ble Justice Sri. R. Gururajan Committee.

**Read:** 1) Government Order No. EN 90 PPC 2010 dated 01.03.2011.

2) Corrigendum No. EN 90 PPC 2010 dated 16.03.2011.

3) Letter No. PCKL/A1/12/2005-06/6871-72 dated 30.03.2011 received from the Managing Director, Power Company of Karnataka Limited.

4) Letter No. PCKL/A1/12/2005-06/04 dated 01.04.2011 received from the Additional Director (Projects), Power Company of Karnataka Limited.

**Preamble :**

1. In Government Order read at (1) above, an Independent Committee was constituted under the Chairmanship of Hon'ble Justice Sri. R. Gururajan and referred the issue of heat rate and calculation of energy charge payment of Udupi Power Project. The Committee was directed to submit its Report to the Government within a period of one month.

2. The Managing Director, Power Company of Karnataka Limited and Nodal Officer of the above Committee, vide letter read at (3) above has stated that the Committee held its first hearing on 25th March 2011 and second hearing on 27th March 2011. During the 1st Meeting, the Chairman expressed that one month time stipulated by Government vide Government Order read at (1) above for submission of report shall commence from the date of issue of Corrigendum read at (2) above, i.e., on or before 16th April 2011 and that no extension is anticipated.

3. In the letter read at (4) above, Power Company of Karnataka Limited has requested to extend the validity of the Government Order read at (1) above, upto 16th April 2011.

4. The request of the Power Company of Karnataka Limited has been examined and hence the following order.

**Government Order No. : EN 90 PPC 2010, Bangalore, Dated : 15-04-2011**

The State Government is pleased to accord approval to extend the validity of the Government Order dated 1st March 2011 for finalization and submission of Report to the Government up to 16th April 2011.

By Order and in the name of the Governor of Karnataka

**Suresh.B.Krishnappanavar**

Under Secretary to Government

Energy Department

P.R. 1115

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಸೃಜನಶೀಲ ವಿಜ್ಞಾನ ಬೋಧನೆಗೆ ಅಸಾಧಾರಣ ಕೊಡುಗೆ ನೀಡಿದ ವಿಜ್ಞಾನ ಅಧ್ಯಾಪಕರಿಗೆ ಮತ್ತು ವಿಜ್ಞಾನ ಸಂವಹನಕಾರರಿಗೆ ಪ್ರಶಸ್ತಿ ಪ್ರಧಾನಗೊಳಿಸಲು ಅನುಮೋದನೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ ವಿಯಇ 50 ವಿತ್ರಮ 2010, ದಿನಾಂಕ: 13-04-2010.
2) ಸರ್ಕಾರದ ಆದೇಶ ಸಂಖ್ಯೆ ವಿಯಇ 33 ವಿತ್ರಮ 2009, ದಿನಾಂಕ: 21-05-2010.
3) ಸರ್ಕಾರದ ಆದೇಶ ಸಂಖ್ಯೆ ವಿಯಇ 164 ವಿತ್ರಮ 2010, ದಿನಾಂಕ: 25-10-2010.
4) ಸರ್ಕಾರದ ಆದೇಶ ಸಂಖ್ಯೆ ವಿಯಇ 22 ವಿತ್ರಮ 2010, ದಿನಾಂಕ: 25-01-2010
5) ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ಇವರ ಪತ್ರ ಸಂಖ್ಯೆ: VGST/P-14/ASTSC/10-11/614, ದಿನಾಂಕ: 19.02.2011
6) ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 118 ವೆಚ್ಚ-2/11, ದಿನಾಂಕ: 21.03.2011

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು ಮುಂದುವರೆಸಿ 2010-11ನೇ ಸಾಲಿಗೆ ಅನುಷ್ಠಾನಗೊಳಿಸಲು ಆದೇಶ ಹೊರಡಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ 2010-11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 3425-60-600-0-02 (059) (ಯೋ) ಇದರಡಿಯಲ್ಲಿ ಒಟ್ಟು ರೂ. 10.00 ಕೋಟಿಗಳ ಅನುದಾನವನ್ನು ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಯೋಜನೆಗಳಿಗಾಗಿ ಕಲ್ಪಿಸಲಾಗಿದ್ದು, ಇದರ ಅನುಷ್ಠಾನಕ್ಕಾಗಿ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಲಾಗಿದೆ.

ಮೇಲೆ (3) ಮತ್ತು (4)ರಲ್ಲಿ ಓದಲಾದ ಆದೇಶಗಳಲ್ಲಿ 2009-10 ಮತ್ತು 2010-11ನೇ ಸಾಲಿನಲ್ಲಿ ಸೃಜನಶೀಲ ವಿಜ್ಞಾನ ಬೋಧನೆಗೆ ಅಸಾಧಾರಣ ಕೊಡುಗೆ ನೀಡಿದ ವಿಜ್ಞಾನ ಅಧ್ಯಾಪಕರಿಗೆ ಮತ್ತು ವಿಜ್ಞಾನ ಸಂವಹನಕಾರರಿಗೆ (Award for Science Teachers and Science Communicators (AST&SC) ನಗದು ಪ್ರಶಸ್ತಿ ಪ್ರಧಾನ ಮಾಡುವ ಸಲುವಾಗಿ ಒಟ್ಟಾರೆ ರೂ. 7.50 ಲಕ್ಷಗಳನ್ನು ಬಿಡುಗಡೆ ಮಾಡಿದೆ.

ಮೇಲೆ (5)ರಲ್ಲಿ ಓದಲಾದ ಕಾರ್ಯ ನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ, ಬೆಂಗಳೂರು – ಇವರ ಪತ್ರದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಮಾರ್ಗಸೂಚಿಯನ್ವಯ ಸೃಜನಶೀಲ ವಿಜ್ಞಾನ ಬೋಧನೆಗೆ ಅಸಾಧಾರಣ ಕೊಡುಗೆ ನೀಡಿದ ವಿಜ್ಞಾನ ಅಧ್ಯಾಪಕರಿಗೆ ಮತ್ತು ವಿಜ್ಞಾನ ಸಂವಹನಕಾರರಿಗೆ ಅರ್ಜಿಗಳನ್ನು ಆಹ್ವಾನಿಸಿದ್ದು, ನಿಗದಿಪಡಿಸಿದ ಕೊನೆಯ ದಿನಾಂಕ: 14-10-2010ರೊಳಗೆ 19 ಅರ್ಜಿಗಳನ್ನು ಸ್ವೀಕರಿಸಲಾಗಿದ್ದು, ಸದರಿ ಅರ್ಜಿಗಳನ್ನು ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ರಚಿಸಿದ ಉಪ ಸಮಿತಿಯು ದಿನಾಂಕ: 14-02-2011ರಂದು ಮಾರ್ಗಸೂಚಿಯನ್ವಯ ಅರ್ಜಿಗಳನ್ನು ಪರಿಶೀಲಿಸಿ ಈ ಕೆಳಕಂಡ 7 ಅರ್ಹ ಫಲಾನುಭವಿಗಳಿಗೆ ನಗದು ಪ್ರಶಸ್ತಿ ಪ್ರಧಾನಗೊಳಿಸಲು ಶಿಫಾರಸ್ಸು ಮಾಡಿ ಸರ್ಕಾರದಿಂದ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

| ಕ್ರಮ ಸಂಖ್ಯೆ | ಪ್ರಶಸ್ತಿ ಪುರಸ್ಕೃತರು | ವಿಳಾಸ | ಪ್ರಶಸ್ತಿ ವಿಭಾಗ |
|---|---|---|---|
| 1 | ಶ್ರೀ ಅಜ್ಜಯ್ಯ ಟಿ<br>ವಿಜ್ಞಾನ ಅಧ್ಯಾಪಕರು | ವಿ.ಎಮ್. ಬಾಲಕರ ಪ್ರೌಢಶಾಲೆ,<br>ಹುನಗುಂದ, ಬಾಗಲಕೋಟೆ<br>-587 118 | ಸೃಜನಶೀಲ ವಿಜ್ಞಾನ ಬೋಧನೆಗೆ ಅಸಾಧಾರಣ ಕೊಡುಗೆ – ಪ್ರೌಢಶಾಲಾ ವಿಭಾಗ |
| 2 | ಪ್ರೊ. ಕೇಶವ ಎ. ಬುಲ್‌ಬುಲೆ<br>ಸಹಾಯಕ ಪ್ರಾಧ್ಯಾಪಕರು ಹಾಗೂ<br>ಮುಖ್ಯಸ್ಥರು ರಸಾಯನಶಾಸ್ತ್ರ ವಿಭಾಗ | ಕೆ.ಎಲ್.ಇ. ಸಂಸ್ಥೆಯ ಎಸ್. ನಿಜಲಿಂಗಪ್ಪ ಕಾಲೇಜು,<br>ರಾಜಾಜಿನಗರ, 2ನೇ ಹಂತ, ಬೆಂಗಳೂರು-10 | ಸೃಜನಶೀಲ ವಿಜ್ಞಾನ ಬೋಧನೆಗೆ ಅಸಾಧಾರಣ ಕೊಡುಗೆ – ಪದವಿ ಕಾಲೇಜು |
| 3 | ಡಾ॥ ಹೆಚ್.ಎಸ್. ನಿರಂಜನ ಆರಾಧ್ಯ<br>ಸಹಾಯಕ ಪ್ರಾಧ್ಯಾಪಕರು ಹಾಗೂ<br>ಪ್ರಾಂಶುಪಾಲರು | ಶ್ರೀ ಸಿದ್ದಗಂಗಾ ಕಾಲೇಜ್ ಆಫ್ ಆರ್ಟ್ಸ್, ಸೈನ್ಸ್ ಅಂಡ್<br>ಕಾಮರ್ಸ್ ಫಾರ್ ಬಾಯ್ಸ್, ಬಿ.ಹೆಚ್. ರಸ್ತೆ,<br>ತುಮಕೂರು-572 102 | ವಿಜ್ಞಾನ ಸಂವಹನ |

| | | | |
|---|---|---|---|
| 4 | ಶ್ರೀ ಟಿ.ಆರ್. ಅನಂತ ರಾಮು | #534, 14ನೇ ಮೇನ್, 70ನೇ ಕ್ರಾಸ್, ಕುಮಾರಸ್ವಾಮಿ ಲೇಔಟ್, 1ನೇ ಹಂತ, ಬೆಂಗಳೂರು–560 078 | ವಿಜ್ಞಾನ ಸಂವಹನ |
| 5 | ಡಾ॥ ಸುಧೀಂದ್ರ ಹಾಲ್ದೊಡ್ಡೇರಿ | # 1499, 1ನೇ ಹಂತ, ಸೌತ್‌ಎಂಡ್ 'ಬಿ' ರೋಡ್, 9ನೇ ಹಂತ, ಜೈನಗರ ಈಸ್ಟ್, ಬೆಂಗಳೂರು–560 069 | ವಿಜ್ಞಾನ ಸಂವಹನ |
| 6 | ಶ್ರೀ ಎಮ್. ಅಬ್ದುಲ್ ರೆಹಮಾನ್ ಪಾಷ | ನಮ್ಮನೆ, 81/37–3, 12ನೇ ಡಿ ಮೇನ್, ಶಿವನಗರ, ಬೆಂಗಳೂರು–560 010 | ವಿಜ್ಞಾನ ಸಂವಹನ |
| 7 | ಶ್ರೀ ಸಾತನೂರು ದೇವರಾಜ್ ಯು | # ಹೆಚ್.ಐ.ಜಿ 29, ಗ್ರೂಪ್ 1, ಕೆ.ಹೆಚ್.ಬಿ ಕಾಲೋನಿ, ಹುಟಗಲ್ಲಿ, ಮೈಸೂರು–570 018 | ವಿಜ್ಞಾನ ಸಂವಹನ |

2010–11ನೇ ಸಾಲಿನಲ್ಲಿ ಉಪ–ಸಮಿತಿಯ ಶಿಫಾರಸ್ಸಿನಂತೆ ವಿಜ್ಞಾನ ಅಧ್ಯಾಪಕರಿಗೆ ಮತ್ತು ವಿಜ್ಞಾನ ಸಂವಹನಕಾರರಿಗೆ ನಗದು ಪ್ರಶಸ್ತಿ ಪ್ರಧಾನ ಮಾಡುವ ಸಲುವಾಗಿ ಮೇಲೆ (6)ರಲ್ಲಿ ಓದಲಾದ ಆರ್ಥಿಕ ಇಲಾಖೆಯ ಟಿಪ್ಪಣಿಯನ್ವಯ ತಲಾ ರೂ. 50,000/–ಗಳಂತೆ ಒಟ್ಟು ರೂ. 3.50 ಲಕ್ಷಗಳ ಮೊತ್ತದಲ್ಲಿ ಮೇಲಿನ ಏಳು (7) ಅಭ್ಯರ್ಥಿಗಳ ಪ್ರಸ್ತಾವನೆಗಳನ್ನು ಅನುಮೋದಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಿಯಇ 22 ವಿತ್ರಮ 2010, ಬೆಂಗಳೂರು, ದಿನಾಂಕ 13–04– 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2010–11ನೇ ಸಾಲಿನಲ್ಲಿ ಅನುಬಂಧ "ಅ" ರಲ್ಲಿ ವಿವರಿಸಿರುವಂತೆ ಏಳು ಅರ್ಹ ವಿಜ್ಞಾನ ಅಧ್ಯಾಪಕರಿಗೆ ಮತ್ತು ವಿಜ್ಞಾನ ಸಂವಹನಕಾರರಿಗೆ ಒಟ್ಟು ರೂ. 3.50 ಲಕ್ಷಗಳ (ರೂ. ಮೂರು ಲಕ್ಷ ಐವತ್ತು ಸಾವಿರ ಮಾತ್ರ) ಮೊತ್ತದಲ್ಲಿ ತಲಾ ರೂ. 50,000/– ಗಳಂತೆ ನಗದು ಪ್ರಶಸ್ತಿ ಪ್ರದಾನ ಮಾಡಲು ಈ ಕೆಳಕಂಡ ನಿಬಂಧನೆ ಮೇರೆಗೆ ಸರ್ಕಾರದ ಅನುಮೋದನೆ ನೀಡಲಾಗಿದೆ.

1) ಈ ಯೋಜನೆಯ ಅನುಷ್ಠಾನದ ಸಲುವಾಗಿ ಬಿಡುಗಡೆ ಮಾಡಿರುವ ಹಣವು ಸದ್ಬಳಕೆಯಾಗದಿದ್ದರೆ ಅಥವಾ ಈ ಯೋಜನೆ ಅನುಷ್ಠಾನವನ್ನು ಮಧ್ಯದಲ್ಲಿ ರದ್ದುಪಡಿಸಿದರೆ ಸರ್ಕಾರದಿಂದ ನೀಡಲಾದ ಆರ್ಥಿಕ ಸೌಲಭ್ಯವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
2) ಈ ಯೋಜನೆಯ ಅನುಷ್ಠಾನಕ್ಕೆ ಅನುದಾನವನ್ನು ಸದುಪಯೋಗ ಮಾಡಿಕೊಂಡಿದ್ದಕ್ಕೆ ಲೆಕ್ಕ ಪರಿಶೋಧಕರಿಂದ ಮಾಡಿಸಲ್ಪಟ್ಟ ದೃಢೀಕೃತ ಉಪಯೋಗತಾ ಪ್ರಮಾಣ ಪತ್ರಗಳನ್ನು ನಿಗದಿತ ಕಾಲಮಿತಿಯಲ್ಲಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
3) ಸರ್ಕಾರದಿಂದ ಯಾವ ಉದ್ದೇಶಕ್ಕಾಗಿ ಅನುದಾನ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ: 16–05–2008ರ ಅಡಿಯಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಪ್ರದತ್ತವಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ
ಮತ್ತು ತಂತ್ರಜ್ಞಾನ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 22 ವಿತ್ರಮ 2010, ಬೆಂಗಳೂರು ದಿನಾಂಕ: 13–04–2011**

**ಅನುಬಂಧ – ಅ**

| ಕ್ರಮ ಸಂಖ್ಯೆ | ಪ್ರಶಸ್ತಿ ಪುರಸ್ಕೃತರು | ವಿಳಾಸ | ಪ್ರಶಸ್ತಿ ವಿಭಾಗ |
|---|---|---|---|
| 1 | ಶ್ರೀ ಅಜ್ಜಯ್ಯ ಟಿ<br>ವಿಜ್ಞಾನ ಅಧ್ಯಾಪಕರು | ವಿ.ಎಮ್. ಬಾಲಕರ ಪ್ರೌಢಶಾಲೆ, ಹುನಗುಂದ, ಬಾಗಲಕೋಟೆ–587 118 | ಸೃಜನಶೀಲ ವಿಜ್ಞಾನ ಬೋಧನೆಗೆ ಅಸಾಧಾರಣ ಕೊಡುಗೆ – ಪ್ರೌಢಶಾಲಾ ವಿಭಾಗ |
| 2 | ಪ್ರೊ. ಕೇಶವ ಎ. ಬುಲ್‌ಬುಲೆ<br>ಸಹಾಯಕ ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು ರಸಾಯನಶಾಸ್ತ್ರ ವಿಭಾಗ | ಕೆ.ಎಲ್.ಇ. ಸಂಸ್ಥೆಯ ಎಸ್. ನಿಜಲಿಂಗಪ್ಪ ಕಾಲೇಜು, ರಾಜಾಜಿನಗರ, 2ನೇ ಹಂತ, ಬೆಂಗಳೂರು–10 | ಸೃಜನಶೀಲ ವಿಜ್ಞಾನ ಬೋಧನೆಗೆ ಅಸಾಧಾರಣ ಕೊಡುಗೆ – ಪದವಿ ಕಾಲೇಜು |
| 3 | ಡಾ॥ ಹೆಚ್.ಎಸ್. ನಿರಂಜನ ಆರಾಧ್ಯ<br>ಸಹಾಯಕ ಪ್ರಾಧ್ಯಾಪಕರು ಹಾಗೂ ಪ್ರಾಂಶುಪಾಲರು | ಶ್ರೀ ಸಿದ್ದಗಂಗಾ ಕಾಲೇಜ್ ಆಫ್ ಆರ್ಟ್ಸ್, ಸೈನ್ಸ್ ಅಂಡ್ ಕಾಮರ್ಸ್ ಫಾರ್ ಬಾಯ್ಸ್, ಬಿ.ಹೆಚ್. ರಸ್ತೆ, ತುಮಕೂರು–572 102 | ವಿಜ್ಞಾನ ಸಂವಹನ |
| 4 | ಶ್ರೀ ಟಿ.ಆರ್. ಅನಂತ ರಾಮು | # 534, 14ನೇ ಮೇನ್, 70ನೇ ಕ್ರಾಸ್, ಕುಮಾರಸ್ವಾಮಿ ಲೇಔಟ್, 1ನೇ ಹಂತ, ಬೆಂಗಳೂರು–560 078 | ವಿಜ್ಞಾನ ಸಂವಹನ |
| 5 | ಡಾ॥ ಸುಧೀಂದ್ರ ಹಾಲ್ದೊಡ್ಡೇರಿ | # 1499, 1ನೇ ಹಂತ, ಸೌತ್‌ಎಂಡ್ 'ಬಿ' | ವಿಜ್ಞಾನ ಸಂವಹನ |

| | | | |
|---|---|---|---|
| | | ರೋಡ್, 9ನೇ ಹಂತ, ಜೈನಗರ ಈಸ್ಟ್, ಬೆಂಗಳೂರು-560 069 | |
| 6 | ಶ್ರೀ ಎಮ್. ಅಬ್ದುಲ್ ರೆಹಮಾನ್ ಪಾಷ | ನಮ್ಮನೆ, 81/37-3, 12ನೇ ಡಿ ಮೇನ್, ಶಿವನಗರ, ಬೆಂಗಳೂರು-560 010 | ವಿಜ್ಞಾನ ಸಂವಹನ |
| 7 | ಶ್ರೀ ಸಾತನೂರು ದೇವರಾಜ್ ಯು | # ಹೆಚ್.ಐ.ಜಿ 29, ಗ್ರೂಪ್ 1, ಕೆ.ಹೆಚ್.ಬಿ ಕಾಲೋನಿ, ಹುಟಗಲ್ಲಿ, ಮೈಸೂರು-570 018 | ವಿಜ್ಞಾನ ಸಂವಹನ |

**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 1116

## ಸಾರಿಗೆ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಸಾರಿಇ 110 ಸಾಸಂಸೇ 2010, ಬೆಂಗಳೂರು ದಿನಾಂಕ: 02-04-2011**

ಸರ್ಕಾರದ ಆದೇಶ ಸಂಖ್ಯೆ: ಸಾರಿಇ 110 ಸಾಸಂಸೇ 2010, ದಿನಾಂಕ: 25-02-2011ರ ಅಧಿಸೂಚನೆಯ 5ನೇ ಸಾಲಿನಲ್ಲಿ **"ತಕ್ಷಣದಿಂದ ಜಾರಿಗೆ ಬರುವಂತೆ"** ಎಂಬುದರ ಬದಲಾಗಿ **"ದಿನಾಂಕ: 25-10-2010ರಿಂದ ಜಾರಿಗೆ ಬರುವಂತೆ"** ಎಂದು ಓದಿಕೊಳ್ಳುವುದು. ಇನ್ನುಳಿದಂತೆ ಸರ್ಕಾರದ ಅಧಿಸೂಚನೆಯ ಉಳಿದ ಅಂಶಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಹರಿಹರಸ್ವಾಮಿ**
ಪೀಠಾಧಿಕಾರಿ (ಪ್ರಭಾರ),
ಸಾರಿಗೆ ಇಲಾಖೆ

ಪಿ.ಆರ್. 1117

## ಕಂದಾಯ ಸಚಿವಾಲಯ

**ವಿಷಯ :** ಕಂದಾಯ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಗ್ರಾಮ ಸಹಾಯಕರ ಮಾಸಿಕ ಮಿತವೇತನವನ್ನು ರೂ. 3000/-ಗಳಿಂದ ರೂ. 3500/-ಗಳಿಗೆ ಹೆಚ್ಚಿಸಿರುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಕಂಇ. 1 ಬಿಎಸ್.ಸಿ.2005, ದಿನಾಂಕ: 08.8.2005.
2. ಸರ್ಕಾರದ ಆದೇಶ ಸಂಖ್ಯೆ: ಕಂಇ 01 ಬಿಎಸ್.ಸಿ.2005, ದಿನಾಂಕ: 10.07.2007.
3. ಸರ್ಕಾರದ ಆದೇಶ ಸಂಖ್ಯೆ: ಕಂಇ 474 ಬಿಎಸ್.ಸಿ.2005, ದಿನಾಂಕ: 25.08.2009.

**ಪ್ರಸ್ತಾವನೆ :**

ಕಂದಾಯ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಗ್ರಾಮಸಹಾಯಕರ ಮಾಸಿಕ ಮಿತವೇತನವನ್ನು ಪ್ರಥಮವಾಗಿ ಮಾಸಿಕ ಪ್ರತಿ ತಿಂಗಳಿಗೆ ರೂ. 100-00 ರಂತೆ ಮಿತವೇತನದ ರೂಪದಲ್ಲಿ ನೀಡಲಾಗುತ್ತಿತ್ತು. ತದನಂತರ ಈ ಮೊತ್ತವನ್ನು ಕಾಲಕಾಲಕ್ಕೆ ಹೆಚ್ಚಿಸುತ್ತಾ ಬಂದು, ಮೇಲೆ ಓದಲಾದ (3) ರ ಸರ್ಕಾರದ ಆದೇಶದನ್ವಯ ದಿನಾಂಕ: 8.8.2005ರಲ್ಲಿ ಗ್ರಾಮಸಹಾಯಕರ ಮಾಸಿಕ ಮಿತವೇತನವನ್ನು ರೂ. 1000/-ದಿಂದ ರೂ. 2000/-ಗಳಿಗೆ ಹೆಚ್ಚಿಸಿ ಆದೇಶ ಹೊರಡಿಸಲಾಗಿದೆ. ಈಗಾಗಲೇ ಮಂಜೂರಾಗಿರುವ ಒಟ್ಟು 10450 ಗ್ರಾಮ ಸಹಾಯಕರ ಹುದ್ದೆಗಳನ್ನು ಮಾಸಿಕ ಮಿತವೇತನ ರೂ. 2000/- ಗಳಂತೆ ಮಿತವೇತನದ ಆಧಾರದ ಮೇಲೆ ಖಾಯಂ ಆಗಿ ಮುಂದುವರೆಸಿ ಮೇಲೆ ಓದಲಾದ (2)ರ ಆದೇಶದಲ್ಲಿ ಆದೇಶಿಸಲಾಗಿರುತ್ತದೆ.

2011-12ನೇ ಸಾಲಿನ ಆಯವ್ಯಯ ಮಂಡನೆಯ ಸಂದರ್ಭದಲ್ಲಿ ಪ್ರಸ್ತುತ ಗ್ರಾಮ ಸಹಾಯಕರು ಪಡೆಯುತ್ತಿರುವ ಗೌರವಧನವನ್ನು ರೂ. 3000/-ರಿಂದ ರೂ. 3500/-ಗಳಿಗೆ ಹೆಚ್ಚಿಸಲಾಗುವುದೆಂದು ಘೋಷಿಸಲಾಗಿರುತ್ತದೆ. ಅದರಂತೆ, ಸದರಿ ಗ್ರಾಮಸಹಾಯಕರ ಮಾಸಿಕ ಸಂಭಾವನೆಯನ್ನು ಏಪ್ರಿಲ್ ದಿನಾಂಕ: 01.04.2011ರಿಂದ ಜಾರಿಗೆ ಬರುವಂತೆ ರೂ. 3500/-ಗಳಿಗೆ ಹೆಚ್ಚಿಸಲು ಈ ಕೆಳಕಂಡಂತೆ ಸರ್ಕಾರವು ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 35 ಬಿಎಸ್‌ಸಿ 2009, ಬೆಂಗಳೂರು ದಿನಾಂಕ 02-04- 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಗ್ರಾಮಸಹಾಯಕರ ಮಿತವೇತನವನ್ನು ದಿನಾಂಕ: 01.04.2011ರಿಂದ ಅನ್ವಯಿಸುವಂತೆ ರೂ. 3000/-ಗಳಿಂದ ರೂ. 3500/-ರವರೆಗೆ (ಮೂರು ಸಾವಿರದ ಐದುನೂರು ರೂಪಾಯಿ ಮಾತ್ರ) ಹೆಚ್ಚಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 889 ವೆಚ್ಚ-7/2010, ದಿನಾಂಕ: 10.03.2011ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಬಾಲಕೃಷ್ಣಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ ಮತ್ತು ಸೇವೆಗಳು-2)

ಪಿ.ಆರ್. 1118

## ಕಂದಾಯ ಸಚಿವಾಲಯ

**ವಿಷಯ :** ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಕಛೇರಿಯನ್ನು ಶಿಂಷಾ ಭವನ ಕಟ್ಟಡದಿಂದ ಸ್ಥಳಾಂತರಿಸುವ ಹಾಗೂ ಒಳವಿನ್ಯಾಸಕ್ಕೆ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ :** 1. ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಅ.ಸ.ಪತ್ರ ಸಂಖ್ಯೆ: ಬಿಎಲ್‌ಡಿ 01/1994–95, ದಿನಾಂಕ 24.03.2011.

2. ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಅ.ಸ.ಪತ್ರ ಸಂಖ್ಯೆ: ಬಿಎಲ್‌ಡಿ 01/1994–95, ದಿನಾಂಕ: 31.03.2011.

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ದಿನಾಂಕ: 24.03.2011 ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ವ್ಯವಸ್ಥಾಪಕ ನಿರ್ದೇಶಕರು, ಬಿಎಂಟಿಸಿ ರವರ ಸ್ವಾಮ್ಯಕ್ಕೆ ಒಳಪಟ್ಟಿರುವ ಸಾರಿಗೆ ಸಂಕೀರ್ಣ, ಶಾಂತಿನಗರ, ಬೆಂಗಳೂರು ಇಲ್ಲಿ ಸುಮಾರು 32366 ಚದರ ಅಡಿಗಳ ಕಟ್ಟಡಕ್ಕೆ ಒಪ್ಪಿಗೆ ನೀಡಿದ್ದು, ಅದರಂತೆ ಸರ್ಕಾರದಿಂದ ಕಟ್ಟಡ ಸ್ಥಳಾಂತರಿಸಲು ಅನುಮತಿ ಕೋರಿದಾಗ ಸರ್ಕಾರವು ಆದೇಶ ಸಂಖ್ಯೆ:ಕಂಇ 28 ಮುನೋಮು 2011 ದಿನಾಂಕ 25.02.2011ರಲ್ಲಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಕಛೇರಿ, ಶಿಂಷಾ ಭವನ ಕಟ್ಟಡದಿಂದ ಬಿಎಂಟಿಸಿ ಶಾಂತಿನಗರ ಸಾರಿಗೆ ಸಂಕೀರ್ಣದ 2ನೇ ಮಹಡಿಯಲ್ಲಿ 25,000 ಚದರ ಅಡಿ ಜಾಗದ ಕಟ್ಟಡಕ್ಕೆ ಹಾಗೂ ಕಛೇರಿ ಅನುಕೂಲಕ್ಕೆ ತಕ್ಕಂತೆ ಒಳವಿನ್ಯಾಸವನ್ನು ಮತ್ತು ಗಣಕೀಕರಣಕ್ಕೆ ಬೇಕಾಗಿರುವ ಲ್ಯಾನ್ ವ್ಯವಸ್ಥೆಯನ್ನು ಮಾಡಿಸಿ ಕೊಟ್ಟು ಮತ್ತು ಸವಲತ್ತುಗಳನ್ನು ನೀಡಿದ ನಂತರ ಲೋಕೋಪಯೋಗಿ ಇಲಾಖೆಯವರು ನಿಗದಿಪಡಿಸಿರುವ ದರಕ್ಕೆ ಬಾಡಿಗೆಯನ್ನು ಕಟ್ಟಡದ ಮಾಲೀಕರಿಗೆ ನೀಡುವ ಷರತ್ತಿಗೊಳಪಟ್ಟು ಕಛೇರಿಯನ್ನು ಸ್ಥಳಾಂತರಿಸಲು ಸರ್ಕಾರದ ಅನುಮತಿ ನೀಡಲಾಗಿದೆ. ಉಳಿದ 7366 ಚದರ ಅಡಿ ಸ್ಥಳದಲ್ಲಿ ಜಿಲ್ಲಾ ನೋಂದಣಿ ಕಛೇರಿ, ಜಯನಗರ ಹಾಗೂ ಜಿಲ್ಲಾ ನೋಂದಣಿ ಕಛೇರಿ, ಬಸವನಗುಡಿ ಕಛೇರಿಗಳನ್ನು ಸ್ಥಳಾಂತರಿಸಲು ಅನುಮತಿ ನೀಡಬೇಕಾಗಿದ್ದು ಹಾಗೂ ಕಟ್ಟಡದ ಒಳವಿನ್ಯಾಸಗೊಳಿಸಲು ಇಲಾಖೆಯ ಲೆಕ್ಕ ಶೀರ್ಷಿಕೆಯಿಂದ ಅನುದಾನವನ್ನು ಮರು ಹೊಂದಾಣಿಕೆ ಮಾಡಿಕೊಂಡು ಸದರಿ ಕಟ್ಟಡದ ಕಛೇರಿಯ ಒಳಾಂಗಣ ವಿನ್ಯಾಸಕ್ಕೆ ಕ್ರಮ ತೆಗೆದುಕೊಳ್ಳಲಾಗುತ್ತಿದೆ. ಈ ವಿಷಯದಲ್ಲಿ ರೂ. 2.50 ಕೋಟಿಯ ಅಂದಾಜು ಮೊತ್ತವನ್ನು ಲಭ್ಯವಿರುವ ಅನುದಾನದಿಂದ ಪುನರ್ ವಿನಿಯೋಗ ಮಾಡುವುದರ ಮೂಲಕ ಮಂಜೂರಾತಿ ನೀಡಬೇಕೆಂದು ಕೋರಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ.(2)ರ ದಿನಾಂಕ: 31.03.2011 ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ಬಿಎಂಟಿಸಿ ಸಂಕೀರ್ಣ, ಶಾಂತಿನಗರ ಕಟ್ಟಡದಲ್ಲಿ ಒಳವಿನ್ಯಾಸಕ್ಕಾಗಿ ' 2.50 ಕೋಟಿಗಳ ಮಂಜೂರಾತಿಗಾಗಿ ಮೇಲೆ ಓದಲಾದ (1) ರ ಪತ್ರದಂತೆ ಕೋರಲಾಗಿತ್ತು. ಆದರೆ ಆರ್ಥಿಕ ಇಲಾಖೆಯು ಆದೇಶ ಸಂಖ್ಯೆ: ಎಫ್‌ಡಿ 443 ಬಿಆರ್‌ಎಸ್ 2010, ದಿನಾಂಕ: 30.03.2011 ರಲ್ಲಿ ' 1.85 ಕೋಟಿಗಳನ್ನು ಪುನರ್‌ವಿನಿಯೋಗ ಮಾಡಿ ಆದೇಶ ಹೊರಡಿಸಿರುತ್ತದೆ. ಆದ್ದರಿಂದ ಆಡಳಿತ ಇಲಾಖೆಯಿಂದ ಲೈನ್ ಅಂದಾಜಿನಲ್ಲಿ ತಿಳಿಸಿರುವ ಅಂಶ 2ನ್ನು ಹೊರತುಪಡಿಸಿ ಅಂದರೆ ಅಧಿಕಾರಿಗಳಿಗೆ ಮೇಜು, ಚರ್ಚಾ ಮೇಜು, ಸ್ವಾಗತಕಾರರ ಮೇಜು, ಆಡಿಟೋರಿಯಂ ಕುರ್ಚಿಗಳು, ಸೋಫಾ ಮುಂತಾದವುಗಳನ್ನು ಹೊರತುಪಡಿಸಿ ಉಳಿದ ಅಂಶಗಳಿಗೆ ಅನುಮತಿ ನೀಡುವಂತೆ ಕೋರಿರುತ್ತಾರೆ.

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 71 ಮುನೋಮು 2011, ಬೆಂಗಳೂರು ದಿನಾಂಕ 31–03– 2011**

ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಕೇಂದ್ರ ಕಛೇರಿ ಕಾರ್ಯ ನಿರ್ವಹಿಸುತ್ತಿರುವ ಬೆಂಗಳೂರು ಜಯನಗರ 8ನೇ ಬ್ಲಾಕ್‌ನಲ್ಲಿರುವ ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಶಿಂಷಾ ಭವನ ಕಟ್ಟಡದಿಂದ ಬಿಎಂಟಿಸಿ ಶಾಂತಿನಗರ ಸಾರಿಗೆ ಸಂಕೀರ್ಣದ 2ನೇ ಮಹಡಿಯಲ್ಲಿ 25,000 ಚದರ ಅಡಿ ಜಾಗದ ಕಟ್ಟಡಕ್ಕೆ ಹಾಗೂ ಕಛೇರಿ ಅನುಕೂಲಕ್ಕೆ ತಕ್ಕಂತೆ ಒಳವಿನ್ಯಾಸವನ್ನು ಮತ್ತು ಗಣಕೀಕರಣಕ್ಕೆ ಬೇಕಾಗಿರುವ ಲ್ಯಾನ್ ವ್ಯವಸ್ಥೆಯನ್ನು ಮಾಡಿಸಿ ಕೊಟ್ಟು ಮತ್ತು ಸವಲತ್ತುಗಳನ್ನು ನೀಡಿದ ನಂತರ ಲೋಕೋಪಯೋಗಿ ಇಲಾಖೆಯವರು ನಿಗದಿಪಡಿಸುವ ದರಕ್ಕೆ ಬಾಡಿಗೆಯನ್ನು ಕಟ್ಟಡದ ಮಾಲೀಕರಿಗೆ ನೀಡುವ ಷರತ್ತಿಗೊಳಪಟ್ಟು ಕಛೇರಿಯನ್ನು ಸ್ಥಳಾಂತರಿಸಲು ಹಾಗೂ ಉಳಿದ 7366 ಚದರ ಅಡಿ ಸ್ಥಳದಲ್ಲಿ ಜಿಲ್ಲಾ ನೋಂದಣಿ ಕಛೇರಿ, ಜಯನಗರ ಹಾಗೂ ಜಿಲ್ಲಾ ನೋಂದಣಿ ಕಛೇರಿ, ಬಸವನಗುಡಿ ಕಛೇರಿಗಳನ್ನು ಸ್ಥಳಾಂತರಿಸಲು ಸರ್ಕಾರದ ಅನುಮತಿ ನೀಡಲಾಗಿದೆ.

ಆರ್ಥಿಕ ಇಲಾಖೆಯು ಆದೇಶ ಸಂಖ್ಯೆ: ಎಫ್‌ಡಿ 443 ಬಿಆರ್‌ಎಸ್ 2010, ದಿನಾಂಕ: 30.03.2011 ರಲ್ಲಿ ' 1.85 ಕೋಟಿಗಳನ್ನು ಪುನರ್‌ವಿನಿಯೋಗ ಮಾಡಿರುವ ಮೊತ್ತದಲ್ಲಿ ಸದರ್ರಿ ಕಟ್ಟಡದ ಕಛೇರಿಯ ಒಳಾಂಗಣ ವಿನ್ಯಾಸ, ಲ್ಯಾನ್ ಹಾಗೂ ಇನ್ನಿತರೇ ಕಾಮಗಾರಿಗಾಗಿ ಉಪಯೋಗಿಸಿಕೊಳ್ಳುವುದು.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2030–03–001–1–00–051 ಯೋಜನೇತರ ಅಡಿಯಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ

(ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 1119

## KANNADA AND CULTURE INFORMATION AND TOURISM SECRETARIAT

**Sub :** Approval of Proposal of M/s. Dan Hospitality India Pvt. Ltd to establish "4/5 Star Hotel" Plot No. 1 & 2, EOIZ Industrial Area, Whitefield, Sadaramangala village, K.R. Puram Hobli, Bangalore East Taluk.

**Read:** 1. Government Order No. KCIT 37 TTM 2008 dated: 10-11-2008.

2. Proceedings of 24th State High Level Clearance Committee [SHLCC] Meeting held on 24-01-201`1.

3. UO. Note CI 449 SPI 2010 dated: 18-03-2011 & 05-04-2011

**PREAMBLE:**

In the Government.Order dated 10-11-2008 read at (1) above sanction was accorded to the Project Proposal of M/s. Dan Hospitality India Pvt. Ltd to establish "4/5 Star Hotel" T No. 1&2, EPIP Industrial Area, Whitefield, in 2 acres 1 gunta of land Sadaramangala village, K.R. Puram Hobli, Bangalore East Taluk with an investment of Rs. 201.00 crores, and 2 years period as a valid Period for the approval.

In the Proceedings of 24th State Level Clearance Committee (SHLCC) dated 24-01-2011 read at (2) above, the committee has considered the request of the company for extension of time by 2 years from 9-11-2010 and it has also approved the site of the Industrial area as "EPIP Industrial area" instead of EOIZ Industrial area.

In the U.O. Note dated 18-03-2011 and 05-04-2011 read at (3) above the Commerce and Industries Department while forwarding the Proceedings dated 24-01-2011 of the SHLCC has stated that the location of the site area has been wrongly mentioned as EPIP Industrial area instead of EOIZ Industrial area due to typographical error and hence has requested this Department to correct it as "EOIZ Industrial area Plot No. 1 & 2" instead of EPIP Industrial area. And it has also recommened to extend the approval of validity period for a further period of 2 years from 09-11-2010 as per the recommendations of SHLCC.

In view of the above proposal, the following order;

**Government Order No. KCIT 66 TTM 2010 Bangalore, Dated 6th April, 2011**

Government Order KCIT 37 TTM 2008(4) dated 10-11-2008 approving the Project Proposal of M/s Dan Hospitality India Pvt. Ltd, to establish the hotel project at land, T.No. 1&2, EPIP Industrial area whitefield is here by amended and shall be read as EOIZ Industrial area Plot No. 1&2 of Whitefield Sadaramangala K.R. Puram Hobli, Bangalore East Taluk. Further The validity of the approval of the project is extended for a further period of 2 years from 09-11-2010. Other provision remains unchanged.

By Order and in the name of the Governor of Karnataka

**S. Narayanappa**

Under Secretary to Government

Department of Kannada and Culture,

Information and Tourism.

P.R. 1120

## ವಸತಿ ಸಚಿವಾಲಯ

**ವಿಷಯ :** ಹಾಸನ ಜಿಲ್ಲೆ, ಅರಸೀಕೆರೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಎಂ/1999, ದಿನಾಂಕ: 10/05/2000.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್‌ರಚಿಸಲು ತೀರ್ಮಾನಿಸಿದ್ದು, ಅದರಂತೆ ಹಾಸನ ಜಿಲ್ಲೆ, ಅರಸೀಕೆರೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 163 ಹೆಚ್‌ಎಎಸ್ 2010 ಬೆಂಗಳೂರು, ದಿನಾಂಕ: 12/04/2011.**

ಹಾಸನ ಜಿಲ್ಲೆ, ಅರಸೀಕೆರೆ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1. | ಶ್ರೀಮತಿ ಕೆಂಪಮ್ಮ, ಎ.ಕೆ. ಕಾಲೋನಿ, ಸುಭಾಷ್ ನಗರ, ಅರಸೀಕೆರೆ. | ಎಸ್.ಸಿ (ಮಹಿಳೆ) |
| 2. | ಶ್ರೀ ದೇವರಾಜು ವೈ. ಕೆ. ಬಿನ್ ಕಾಳಶೆಟ್ಟಿ, ಸಹ್ಯಾದ್ರಿ ಟೈಲರ್, ಕರಿಯಮ್ಮ ದೇವಸ್ಥಾನ ರಸ್ತೆ, ಅರಸೀಕೆರೆ. | ಹಿಂದುಳಿದ ವರ್ಗ |
| 3. | ಶ್ರೀ ಜಿ.ಎನ್. ಮನೋಜ್ ಕುಮಾರ್ ಬಿನ್ ಲೇ. ಜಿ.ವಿ. ನಾರಾಯಣ, ಶ್ಯಾನಬೋಗರ ಬೀದಿ ಅರಸೀಕೆರೆ. | ಸಾಮಾನ್ಯ |
| 4. | ಶ್ರಿ ಖ್ವಾಜ ಮೊಹಿನುದ್ದೀನ್ ಬಿನ್ ಇಬ್ರಾಹಿಂ ಸಾಬ್, ಹೊಯ್ಸಳನಗರ, ಅರಸೀಕೆರೆ. | ಅಲ್ಪಸಂಖ್ಯಾತರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಆರ್. ವಲ್ಲೂರು**

ಪೀಠಾಧಿಕಾರಿ–2 ವಸತಿ ಇಲಾಖೆ

ಪಿ.ಆರ್. 1121

## FOREST, ECOLOGY AND ENVIRONMENT SECRETARIAT

**Sub :-** Diversion of 0.8225 ha, of forest land Savanadurga and Siddadevarabetta SF for laying of pipe line for providing drinking water to V.G. Doddi and 27 other villages in Magadi Taluk, Ramanagara District, in favour of the Executive Engineer, Panchayat Raj Engineering Division, Ramanagar.

**Read :-**
1. Letter No. A5(4)GFL.CR.26/10-11, dated:21/01/2011 of Principal Chief Conservator of Forests, Bangalore.
2. Government of India letter No:F.No.11-9/98-FC, dated: 16/10/2000, 21/11/2005, 26/12/2007, 08/04/2009 and 11/09/2009.

**Preamble:**

The Principal Chief Conservator of Forests, Bangalore vide his letter dated 21/01/2011 read at (1) above has submitted the proposal for diversion of 0.8225 ha, of forest land in Savanadurga and Siddadevarabetta State Forests and Athimgere plantations for laying of pipe line for providing drinking water to V.G.Doddi and 27 other Villages in Magadi Taluk, Ramanagara District in favour of the Executive Engineer, Panchayathraj Engineering Division, Ramanagara under the Forest (Conservation) Act, 1980, subject to certain conditions.

This proposal has been examined as per the general approval of Government of India in its letter dated: 16/10/2000, 21/11/2005, 26/12/2007 and 08/04/2009 it has been decided to accord sanction for diversion of 0.8225 ha, of Forest land under the Forest (Conservation) Act, 1980. The proposal has been examined in detail and hence the order.

**Government Order No. FEE 14 FLL 2011 Bangalore, dated : 08/04/2011**

In the circumstances explained in the preamble above and in accordance with the general approval given by Government of India in their letters dated: 16/10/2000, 21/11/2005, 26/12/2007 and 08/04/2009, Government is pleased to accord approval under Forest (Conservation) Act, 1980 for diversion of 0.8225 ha, of forest land in Savanadurga and Siddadevarabetta State Forests and Athimgere plantations for laying of pipe line for providing drinking water to V.G. Doddi and 27 other villages in Magadi Taluk, Ramanagara District in favour of the Executive Engineer, Panchayathraj Engineering Division, Ramanagara under the Forest (Conservation) Act, 1980, subject to the following conditions.

1. The legal status of the Forest land shall remain unchanged and it shall continue as Forest land.
2. The lease tenure is for a period of 30 (Thirty) years.
3. The lessee shall pay lease rent as fixed by the Government from time to time.
4. The leased out area should be used for the purpose for which it is granted. In case the land is not used for the stipulated purpose within one year or when it no longer needed for the stipulated purpose, the area should be resumed to the Forest Department under Section 82 of Karnataka Forest Act, 1963. The concerned Deputy Conservator of Forests is authorized to take necessary action in this regard. No residential building shall be permitted in the proposed area.
5. The Karnataka Forest Act 1963 and Rules 1969 and other relevant Acts and Rules will be applicable for any violation.
6. The User Agency shall not sub-lease, mortagage and hypothecate the forest area.
7. The opened trench shall be refilled properly after laying the pipeline and there shall not be any scope for soil erosion.
8. The road side plantation all along the Savandurga SF to an extent of 1 Km(with 200 seedlings) shall be raised at the cost of User Agency.
9. The User Agency shall ensure that there should be no damage to the available fauna and flora.
10. The User Agency shall abide by all the conditions imposed upon by the Government of India, the Government of Karnataka and the principal chief Conservator of Forests (HoFF).

By order and in the name of the Governor of Karnataka

**H.M. Mallikarjuna Swamy**

Under Secretary to Government

Forest, Ecology and Environment Department

P.R. 1122

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಬ್ಯಾಂಬು ಸೊಸೈಟಿ ಆಫ್ ಇಂಡಿಯಾ ಇವರಿಗೆ ಒಣಗಿದ ಮತ್ತು ಸತ್ತು ಬಿದ್ದ ಬೊಂಬುಗಳನ್ನು ಸರಬರಾಜು ಮಾಡುವ ಕುರಿತು.

**ಓದಲಾಗಿದೆ :** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರ ಪತ್ರ ಸಂಖ್ಯೆ: ಎ7/ಬ್ಯಾಂಬು ಸೊಸೈಟಿ/ಸಿಆರ್-36/10-11,ದಿನಾಂಕ:26/12/2010 ಮತ್ತು 03/08-02-2011.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ: 26/12/2010 ಮತ್ತು 03/08-02-2011ರ ಪತ್ರಗಳಲ್ಲಿ ಶಿವಮೊಗ್ಗ ವಿಭಾಗದ ಆಯನೂರು ವಲಯದ ಅರಣ್ಯ ಪ್ರದೇಶದಲ್ಲಿ ಒಣಗಿದ ಹಾಗು ಸತ್ತು ಬಿದ್ದ ಬೊಂಬುಗಳು ಲಭ್ಯವಿದೆ. ಈ ಬೊಂಬುಗಳನ್ನು ಮೈಸೂರು ಕಾಗದ ಕಾರ್ಖಾನೆ, ಭದ್ರಾವತಿ ವಿಭಾಗ ಇವರಿಗೆ ವಿತರಿಸಿರುವುದಿಲ್ಲ. ಆದರೆ, ಬೇಸಿಗೆ ಕಾಲದಲ್ಲಿ ಬೆಂಕಿಯಿಂದ ಅರಣ್ಯ ಪ್ರದೇಶಗಳನ್ನು ರಕ್ಷಣೆ ಮಾಡಲು ಮತ್ತು ಸತ್ತು ಬಿದ್ದ ಬೊಂಬುಗಳನ್ನು ಸಮರ್ಪಕವಾಗಿ ಬಳಸಿಕೊಂಡು ಸರ್ಕಾರಕ್ಕೆ ಆದಾಯ ತರುವ ಉದ್ದೇಶದಿಂದ, ಶಿವಮೊಗ್ಗ ವಿಭಾಗದ ಆಯನೂರು ವಲಯದ ವ್ಯಾಪ್ತಿಯಲ್ಲಿರುವ ಅರಣ್ಯ ಪ್ರದೇಶಗಳಲ್ಲಿ ದೊರೆಯುವ ಅಂದಾಜು 90 ಟನ್‌ಗಳಷ್ಟು ಒಣಗಿದ ಮತ್ತು ಸತ್ತು ಬಿದ್ದ ಬೊಂಬುಗಳನ್ನು ಬ್ಯಾಂಬು ಸೊಸೈಟಿ ಆಫ್ ಇಂಡಿಯಾ ಇವರಿಗೆ ಸರ್ಕಾರಿ ಆದೇಶ ಸಂಖ್ಯೆ: ಅಪಜೀ 118 ಎಫ್‌ಡಿಪಿ 2009, ದಿನಾಂಕ: 29/03/2010ರಲ್ಲಿ ಪ್ರತಿ ಮೆಟ್ರಿಕ್ ಟನ್‌ಗೆ ರೂ.325/- ಮತ್ತು ತೆರಿಗೆಗಳು ಸೀನಿಯರೇಜ್ ದರದಲ್ಲಿ ಒದಗಿಸಲು ಮಂಜೂರಾತಿ ನೀಡಿರುವಂತೆ, ಕೆ.ಎಸ್.ಎಫ್.ಐ.ಸಿ.ಯ ಮೂಲಕ ದರವನ್ನು ನಿಗಧಿಪಡಿಸಿ ಹಂಚಿಕೆ ಮಾಡಲು ಸರ್ಕಾರದ ಹಂತದಲ್ಲಿ ಅಗತ್ಯ ಕ್ರಮ ಕೈಗೊಳ್ಳುವಂತೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಕೋರಿರುತ್ತಾರೆ.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಅರಣ್ಯದಲ್ಲಿ ಬೆಂಕಿ ತಡೆಗಟ್ಟಲು ಮತ್ತು ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಆಯನೂರು ವಲಯದ ವ್ಯಾಪ್ತಿಯಲ್ಲಿರುವ ಅರಣ್ಯ ಪ್ರದೇಶಗಳಲ್ಲಿ ದೊರೆಯುವ ಅಂದಾಜು 90 ಟನ್‌ಗಳಷ್ಟು ಒಣಗಿದ ಮತ್ತು ಸತ್ತು ಬಿದ್ದ ಬೊಂಬುಗಳನ್ನು ಕೆ.ಎಸ್.ಎಫ್.ಐ.ಸಿ ಮೂಲಕ ಪ್ರತಿ ಮೆಟ್ರಿಕ್ ಟನ್‌ಗೆ ರೂ.325/- ಮತ್ತು ತೆರಿಗೆಗಳು ಸೀನಿಯರೇಜ್ ದರದಲ್ಲಿ ಬ್ಯಾಂಬು ಸೊಸೈಟಿ ಆಫ್ ಇಂಡಿಯಾಗೆ ಹಂಚಿಕೆ ಮಾಡಲು ಸರ್ಕಾರವು ನಿರ್ಧರಿಸಿರುವ ಹಿನ್ನಲೆಯಲ್ಲಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 252 ಎಫ್‌ಡಿಪಿ 2010 ಬೆಂಗಳೂರು, ದಿನಾಂಕ 07-04-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಅರಣ್ಯದಲ್ಲಿ ಬೆಂಕಿ ತಡೆಗಟ್ಟಲು ಮತ್ತು ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಆಯನೂರು ವಲಯದ ವ್ಯಾಪ್ತಿಯಲ್ಲಿರುವ ಅರಣ್ಯ ಪ್ರದೇಶಗಳಲ್ಲಿ ದೊರೆಯುವ ಅಂದಾಜು 90 ಟನ್‌ಗಳಷ್ಟು ಒಣಗಿದ ಮತ್ತು ಸತ್ತು ಬಿದ್ದ ಬೊಂಬುಗಳನ್ನು ಕೆ.ಎಸ್.ಎಫ್.ಐ.ಸಿ. ಮೂಲಕ ಪ್ರತಿ ಮೆಟ್ರಿಕ್ ಟನ್‌ಗೆ ರೂ. 325/- (ಮೂನ್ನೂರು ಇಪ್ಪತ್ತೈದು ಮಾತ್ರ) ರಂತೆ ಮತ್ತು ತೆರಿಗೆಗಳು ಸೀನಿಯರೇಜ್ ದರದಲ್ಲಿ ಬ್ಯಾಂಬು ಸೊಸೈಟಿ ಆಫ್ ಇಂಡಿಯಾ ಇವರಿಗೆ ಹಂಚಿಕೆ ಮಾಡಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1123 ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಶ್ರೀ ಬಿ.ಜಿ. ಸತೀಶ್, System Analyst, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರನ್ನು ದಿನಾಂಕ: 18/04/2011 ರಿಂದ 21/04/2011ರವರೆಗೆ ಗುಜರಾತಿನ ಗಾಂಧಿನಗರದಲ್ಲಿ ನಡೆಯುವ ಮುನ್ಸಿಪಲ್ ಕಾರ್ಪರೇಷನ್ ಚುನಾವಣೆಗಳನ್ನು ವೀಕ್ಷಿಸಲು ನಿಯೋಜಿಸುವ ಬಗ್ಗೆ.

**ಓದಲಾಗಿದೆ :** ಕಾರ್ಯದರ್ಶಿ, ರಾಜ್ಯ ಚುನಾವಣಾ ಆಯೋಗ ಕರ್ನಾಟಕ ಇವರ ಪತ್ರ ಸಂಖ್ಯೆ: ರಾಚುಆ/05/ಸಿಬ್ಬಂದಿ/2011, ದಿನಾಂಕ: 06/04/2011.

**ಪ್ರಸ್ತಾವನೆ :**

ಕಾರ್ಯದರ್ಶಿ, ರಾಜ್ಯ ಚುನಾವಣಾ ಆಯೋಗ ಕರ್ನಾಟಕ ಬೆಂಗಳೂರು. ಇವರ ಪತ್ರ ದಿನಾಂಕ: 06/04/2011ರಲ್ಲಿ ಗುಜರಾತ್ ರಾಜ್ಯದಲ್ಲಿ ನಡೆಯುವ ಗಾಂಧಿನಗರ ಮುನ್ಸಿಪಲ್ ಚುನಾವಣೆಗಳನ್ನು ಪ್ರತ್ಯೇಕ್ಷವಾಗಿ ವಿಕ್ಷೀಸಿ, ಇ-ಮತದಾನದ ಕುರಿತಂತೆ ಅಧ್ಯಯನ ವರದಿಯನ್ನು ತಯಾರಿಸಲು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ನಗರಾಭಿವೃದ್ಧಿ ಇಲಾಖೆ ಇ-ಆಡಳಿತ ಇಲಾಖೆ ಹಾಗೂ ಮಾಹಿತಿ ತಂತ್ರಜ್ಞಾನ ಇಲಾಖೆಯ ಅಧಿಕಾರಿಗಳ ತಂಡವನ್ನು ನಿಯೋಜಿಸಲು ನಿರ್ಧರಿಸಿದ್ದು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖಾ ವತಿಯಿಂದ ಒಬ್ಬ ಅಧಿಕಾರಿಯನ್ನು ನಿಯೋಜಿಸುವಂತೆ ಓದಲಾದ ಪತ್ರದಲ್ಲಿ ಕೋರಿರುತ್ತಾರೆ. ಈ ಸಂಬಂಧ ಶ್ರೀ ಬಿ.ಜಿ. ಸತೀಶ್, System Analyst, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರನ್ನು ದಿನಾಂಕ: 18/04/2011 ರಿಂದ 21/04/2011 ರವರೆಗೆ ಗುಜರಾತ್ ರಾಜ್ಯದಲ್ಲಿ ನಡೆಯುವ ಗಾಂಧಿನಗರ ಮುನ್ಸಿಪಲ್ ಚುನಾವಣೆಗಳನ್ನು ಪ್ರತ್ಯೇಕ್ಷವಾಗಿ ವಿಕ್ಷೀಸಿ, ಇ-ಮತದಾನದ ಕುರಿತಂತೆ ಅಧ್ಯಯನ ವರದಿಯನ್ನು ತಯಾರಿಸುವ ಬಗ್ಗೆ ಮಾಹಿತಿ ತಂತ್ರಜ್ಞಾನ ಇಲಾಖೆಯ ಪ್ರತಿನಿಧಿಯಾಗಿ ನಿಯೋಜಿಸಲು, ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 38 ಎಡಿಎಂ 2011 ಬೆಂಗಳೂರು, ದಿನಾಂಕ: 11/04/2011**

ಶ್ರೀ ಬಿ.ಜಿ. ಸತೀಶ್ System Analyst, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರನ್ನು ದಿನಾಂಕ: 18/04/2011 ರಿಂದ 21/04/2011ರವರೆಗೆ ಗುಜರಾತ್ ರಾಜ್ಯದಲ್ಲಿ ನಡೆಯುವ ಗಾಂಧಿನಗರ ಮುನ್ಸಿಪಲ್ ಚುನಾವಣೆಗಳನ್ನು ಪ್ರತ್ಯೇಕ್ಷವಾಗಿ ವಿಕ್ಷೀಸಿ, ಇ–ಮತದಾನದ ಕುರಿತಂತೆ ಅಧ್ಯಯನ ವರದಿಯನ್ನು ತಯಾರಿಸಲು ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಇಲಾಖೆಯ ಪ್ರತಿನಿಧಿಯಾಗಿ ನಿಯೋಜಿಸಿ ಆದೇಶಿಸಿದೆ.

ಸದರಿ ಅಧಿಕಾರಿಯ ದಿನಾಂಕ: 18/04/2011 ರಿಂದ 21/04/2011ರವರೆಗೆ ಪ್ರವಾಸದ ಅವಧಿ ಹಾಗೂ ಪ್ರಯಾಣಕ್ಕೆ ತೆಗೆದುಕೊಳ್ಳುವ ಅವಧಿಯನ್ನು ಕರ್ತವ್ಯದ ಮೇಲೆ ಎಂದು ಪರಿಗಣಿಸಿದೆ. ಕೆಸಿಎಸ್ಆರ್ ನಿಯಮಾವಳಿ ಪ್ರಕಾರ ಲಭ್ಯವಿರುವ ಪ್ರಯಾಣ ಭತ್ಯೆ, ದಿನ ಭತ್ಯೆ ಪಡೆಯಲು ಅಧಿಕಾರಿಯವರು ಅರ್ಹರಾಗಿರುತ್ತಾರೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10/07/1996ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 1124

## ಸಹಕಾರ ಸಚಿವಾಲಯ

**ವಿಷಯ :** ಭಾರತ ಸರ್ಕಾರದ ಕಾಫಿ ಸಾಲ ಮನ್ನಾ ಪ್ಯಾಕೇಜ್ 2010ರ ಅನುಷ್ಠಾನಕ್ಕೆ ಬ್ಯಾಂಕುಗಳು ಭರಿಸಬೇಕಾದ ವಂತಿಗೆಯನ್ನು ರಾಜ್ಯ ಸರ್ಕಾರ ಭರಿಸಿಕೊಡುವ ಬಗ್ಗೆ.

**ಓದಲಾಗಿದೆ :** ಭಾರತ ಸರ್ಕಾರದ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಮಂತ್ರಾಲಯ, ನವದೆಹಲಿ ಪತ್ರ ಸಂಖ್ಯೆ: 04/03/2008/ಪ್ಲಾಂಟ್(ಬಿ) ದಿನಾಂಕ: 14/06/2010.

**ಪ್ರಸ್ತಾವನೆ :**

ಭಾರತ ಸರ್ಕಾರವು ಕಾಫಿ ಬೆಳೆಗಾರ ರೈತರಿಗೆ ಸಾಲ ಮನ್ನಾ ಪ್ಯಾಕೇಜ್ ಅನುಷ್ಠಾನ ಯೋಜನೆಯನ್ನು ರೂ.241.33 ಕೋಟಿಗಳ ವೆಚ್ಚದಲ್ಲಿ ರೂಪಿಸಿ ಓದಲಾದ ಪತ್ರದ ಮೇರೆಗೆ ಅನುಮೋದನೆ ನೀಡಿರುತ್ತದೆ. ಸದರಿ ಯೋಜನೆಯ ಪ್ರಮುಖ ಅಂಶಗಳು ಈ ಕೆಳಗಿನಂತಿವೆ.

ಅ) ಸಣ್ಣ ಮತ್ತು ಅತಿ ಸಣ್ಣ ಕಾಫಿ ಬೆಳೆಗಾರರು 2002ಕ್ಕಿಂತ ಪೂರ್ವದಲ್ಲಿ ಪಡೆದ ವಿಶೇಷ ಅವಧಿ ಸಾಲದ ಶೇ.50 ರಷ್ಟನ್ನು ಭಾರತ ಸರ್ಕಾರ (ಒಬ್ಬರಿಗೆ ರೂ.5.00 ಲಕ್ಷ ಮಿತಿಗೊಳಪಟ್ಟು) ಹಾಗೂ ಶೇ.25 ರಷ್ಟನ್ನು ಹಣಕಾಸು ಬ್ಯಾಂಕು ಭರಿಸಿ ನಂತರ ಉಳಿದ ಶೇ.25ರಷ್ಟನ್ನು ರಿಶೆಡ್ಯೂಲ್ ಮಾಡುವುದು.

ಆ) ಕಾಫಿ ಬೆಳೆ ಸಾಲದ ಬಾಬ್ತು ರೂ.1.00 ಲಕ್ಷ ಮಿತಿಗೊಳಪಟ್ಟು ಸಾಲದ ಶೇ.10 ಭಾರತ ಸರ್ಕಾರ ಹಾಗೂ ಉಳಿದ ಶೇ.10ನ್ನು ಬ್ಯಾಂಕು ಭರಿಸುವುದು.

ಇ) ಮಧ್ಯಮ ಹಾಗೂ ದೊಡ್ಡ ರೈತರು ಪಡೆದಿರುವ ಕಾಫಿ ಬೆಳೆ ಸಾಲವನ್ನು ರಿಷೆಡ್ಯೂಲ್ ಮಾಡಲು ಅರ್ಹರಿರುತ್ತಾರೆ.

ಈ ಯೋಜನೆಯನ್ನು ಚಿಕ್ಕಮಗಳೂರು, ಹಾಸನ ಮತ್ತು ಕೊಡಗು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳ ಮುಖಾಂತರ ಪಡೆದ ಕಾಫಿ ಸಾಲಗಳಿಗೆ ಹಾಗೂ ಈ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಪಿಕಾರ್ಡ್ ಬ್ಯಾಂಕುಗಳು ಕಸ್ಕಾರ್ಡ್ ಬ್ಯಾಂಕಿನ ಮುಖಾಂತರ ಪಡೆದ ಸಾಲಗಳಿಗೆ ಸೌಲಭ್ಯ ದೊರಕುತ್ತದೆ. ಆದರೆ, ಈ ಜಿಲ್ಲೆಯಲ್ಲಿಯ ಡಿ.ಸಿ.ಸಿ. ಬ್ಯಾಂಕುಗಳು ಹಾಗೂ ಪಿಕಾರ್ಡ್ ಬ್ಯಾಂಕು–ಕಸ್ಕಾರ್ಡ್ ಬ್ಯಾಂಕು ಆರ್ಥಿಕವಾಗಿ ಸದೃಢವಾಗದೇ ಇರುವುದರಿಂದ ಬ್ಯಾಂಕುಗಳ ವತಿಯಿಂದ ನೀಡಬೇಕಾದ ವಂತಿಗೆಯನ್ನು ನೀಡಲು ಅಸಮರ್ಥವಾಗಿರುವುದರಿಂದ ಆಯಾ ಬ್ಯಾಂಕುಗಳ ಕೋರಿಕೆಯನ್ನು ಪರಿಗಣಿಸಿ ಕರ್ನಾಟಕ ರಾಜ್ಯ ಸರ್ಕಾರವು ಬ್ಯಾಂಕಿನ ವತಿಯಿಂದ ಭರಿಸಬೇಕಾದ ವಂತಿಗೆಯನ್ನು ಭರಿಸಲು ಬಂದ ಮನವಿಗಳನ್ನು ಪರಿಗಣಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರ ಆದೇಶ ಸಂಖ್ಯೆ: ಸಿಒ 175 ಸಿಎಲ್ಎಸ್ 2010, ಬೆಂಗಳೂರು, ದಿನಾಂಕ: 27/11/2010**

ಮೇಲೆ ವಿವರಿಸಿದ ಕಾರಣಗಳಿಂದಾಗಿ ಚಿಕ್ಕಮಗಳೂರು, ಹಾಸನ ಮತ್ತು ಕೊಡಗು ಜಿಲ್ಲೆಗಳ ವ್ಯಾಪ್ತಿಯಲ್ಲಿ ಬರುವ ಕೃಷಿ ಪತ್ತಿನ ಸಹಕಾರ ಸಂಘಗಳು / ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು ಭಾತರ ಸರ್ಕಾರದ ಕಾಫಿ ಸಾಲ ಮನ್ನಾ ಪ್ಯಾಕೇಜ್ 2010ರಲ್ಲಿ ಅನುಷ್ಠಾನಗೊಳಿಸುವ ಸಲುವಾಗಿ ಭರಿಸಬೇಕಾದ ವಂತಿಗೆಗಳನ್ನು ಅನುಕ್ರಮವಾಗಿ ಆಯಾ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳು / ಕಸ್ಕಾರ್ಡ್ ಬ್ಯಾಂಕಿಗೆ ಸಂಬಂಧಪಟ್ಟಂತೆ ಒಟ್ಟು ರೂ.2000.59 ಲಕ್ಷಗಳನ್ನು ಈ ಕೆಳಗೆ ವಿವರಿಸಿದಂತೆ ನೀಡಲು ಆದೇಶಿಸಿದೆ.

**I. ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳ ಮುಖಾಂತರ ನೀಡಿದ ಕಾಫಿ ಸಾಲಗಳು**

ಈ ಯೋಜನೆಯಡಿಯಲ್ಲಿ ಚಿಕ್ಕಮಗಳೂರು, ಹಾಸನ ಮತ್ತು ಕೊಡಗು ಜಿಲ್ಲೆಗಳಲ್ಲಿ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳ ಮುಖಾಂತರ ಭರಿಸಬೇಕಾದ ಬ್ಯಾಂಕಿನ ಪಾಲಿನ ಪ್ರತಿಶತ 50ರಷ್ಟನ್ನು ರಾಜ್ಯ ಸರ್ಕಾರವು ಭರಿಸಿ ರೂ.1169.89 ಲಕ್ಷಗಳನ್ನು ಅನುಬಂಧ– Iರಲ್ಲಿ ವಿವರಿಸಿದಂತೆ ಬಿಡುಗಡೆ ಮಾಡಲು ಆದೇಶಿಸಿದೆ.

**II. ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ.**

ಚಿಕ್ಕಮಗಳೂರು, ಹಾಸನ ಮತ್ತು ಕೊಡಗು ಜಿಲ್ಲೆಗಳ ವ್ಯಾಪ್ತಿಯಲ್ಲಿರುವ ಪಿಕಾರ್ಡ್ ಬ್ಯಾಂಕುಗಳ ಮುಖಾಂತರ ನೀಡಿದ ಸಾಲಕ್ಕೆ ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಬೆಂಗಳೂರು ಇದರ ಮುಖಾಂತರ ಇದರ ಪಾಲಿನ ಪ್ರತಿಶತ 75ರಷ್ಟನ್ನು ಸರ್ಕಾರವು ಭರಿಸಲು ರೂ.830.70ಲಕ್ಷಗಳನ್ನು ಅನುಬಂಧ–2ರಲ್ಲಿ ವಿವರಿಸಿದಂತೆ ಬಿಡುಗಡೆ ಮಾಡಲು ಆದೇಶಿಸಿದೆ.

ಸಹಕಾರ ಸಂಘಗಳ ನಿಬಂಧಕರು ಈ ಯೋಜನೆಯಲ್ಲಿ ಹಣ ಬಿಡುಗಡೆ ಮಾಡುವಾಗ ಈ ಕೆಳಗಿನ ಷರತ್ತುಗಳನ್ನು ಪಾಲಿಸತಕ್ಕದ್ದು.

1. ಭಾರತ ಸರ್ಕಾರದ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಮಂತ್ರಾಲಯ, ನವದೆಹಲಿ ಪತ್ರ ಸಂಖ್ಯೆ: 04/03/2008/ಪ್ಲಾಂಟ್(ಬಿ) ದಿನಾಂಕ: 14/06/2010ರಲ್ಲಿ ವಿಧಿಸಲಾದ ಎಲ್ಲಾ ಷರತ್ತುಗಳನ್ನು ಪಾಲಿಸತಕ್ಕದ್ದು.

2. ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು/ಕಸ್ಕಾರ್ಡ್ ಬ್ಯಾಂಕಿನ ಕ್ಲೇಮು ಬಿಲ್ಲುಗಳನ್ನು ಈಗ ಜಾರಿಯಲ್ಲಿರುವ ಬಡ್ಡಿ ಸಹಾಯಧನ ಬಿಲ್ಲುಗಳನ್ನು ಪರಿಶೀಲಿಸುವ ಪದ್ಧತಿಯನ್ನು ಅನುಸರಿಸತಕ್ಕದ್ದು.

ಈ ಕಾಫಿ ಪ್ಯಾಕೇಜನ್ನು ಅನುಷ್ಠಾನಗೊಳಿಸುವ ಸಲುವಾಗಿ ಅವಶ್ಯವಿರುವ ರೂ. 2000.59ಲಕ್ಷಗಳ ಹಣವನ್ನು 2010-11ನೇ ಸಾಲಿನ ಆಯವ್ಯಯದ ಪೂರಕ ಅಂದಾಜು-2 ರಲ್ಲಿ ಲೆಕ್ಕಶೀರ್ಷಿಕೆ "6425-00-108-3-57" ರಡಿ ಭರಿಸತಕ್ಕದ್ದು.

ಈ ಹಣವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 247 ವೆಚ್ಚ-2/2010, ದಿನಾಂಕ: 24/09/2010ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್.ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

## ಅನುಬಂಧ-1

**(ರೂ. ಲಕ್ಷಗಳಲ್ಲಿ)**

| ಕ್ರಮ ಸಂಖ್ಯೆ | ವಿವರ | ಸಾಲಗಾರರ ಸಂಖ್ಯೆ (ರೈತರು) | ಕೇಂದ್ರ ಸರ್ಕಾರದ ಪಾಲು | ಬ್ಯಾಂಕಿನ ಪಾಲು | ರಾಜ್ಯ ಸರ್ಕಾರ ನೀಡಬೇಕಾದ ಶೇ.50ರ ಮೊತ್ತ |
|---|---|---|---|---|---|
| 1. | ಚಿಕ್ಕಮಗಳೂರು ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ನಿ., ಚಿಕ್ಕಮಗಳೂರು | 4353 | **711.36** | **572.74** | **286.37** |
| 2. | ಹಾಸನ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ನಿ., ಹಾಸನ | 6153 | **273.89** | **263.85** | **131.925** |
| 3. | ಕೊಡಗು ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ನಿ., ಮಡಿಕೇರಿ | 17420 | **1990.94** | **1503.19** | **751.595** |
| | **ಒಟ್ಟು** | **27926** | **2976.19** | **2339.78** | **1169.89** |

## ಅನುಬಂಧ-2

**(ರೂ. ಲಕ್ಷಗಳಲ್ಲಿ)**

| ವಿವರ | ಸಾಲಗಾರರ ಸಂಖ್ಯೆ (ರೈತರು) | ಕೇಂದ್ರ ಸರ್ಕಾರದ ಪಾಲು | ಬ್ಯಾಂಕಿನ ಪಾಲು | ರಾಜ್ಯ ಸರ್ಕಾರ ನೀಡಬೇಕಾದ ಶೇ.75ರ ಮೊತ್ತ |
|---|---|---|---|---|
| ಕರ್ನಾಟಕ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಬೆಂಗಳೂರು | 13636 | 2839.91 | 1107.59 | 830.70 |
| **ಜಿಲ್ಲೆಗಳ ಹೆಸರು** | | | | |
| 1. ಕೊಡಗು | 3519 | 795.06 | 316.59 | 237.44 |
| 2. ಹಾಸನ | 3770 | 780.52 | 305.90 | 229.43 |
| 3. ಚಿಕ್ಕಮಗಳೂರು | 6347 | 1264.33 | 485.10 | 363.83 |
| **ಒಟ್ಟು** | **13636** | **2839.91** | **1107.59** | **830.70** |

**ಆರ್.ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. 1125

**ಸಹಕಾರ ಸಚಿವಾಲಯ**

ಸಂಖ್ಯೆ: ಸಿಒ 175 ಸಿಎಲ್ಎಸ್ 2010, ಬೆಂಗಳೂರು, ದಿನಾಂಕ: 28/03/2011

**ತಿದ್ದುಪಡಿ ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಒ 175 ಸಿಎಲ್ಎಸ್ 2010, ಬೆಂಗಳೂರು, ದಿನಾಂಕ: 27/11/2010 ಅನ್ನು ಭಾಗಶ: ತಿದ್ದುಪಡಿ ಮಾಡಿ ಈ ಆದೇಶದ ಭಾಗ– IIರಲ್ಲಿ ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿಯಮಿತ ಇದಕ್ಕೆ ಸಂಬಂಧಪಟ್ಟಂತೆ ಚಿಕ್ಕಮಗಳೂರು, ಹಾಸನ ಮತ್ತು ಕೊಡಗು ಜಿಲ್ಲೆಗಳ ವ್ಯಾಪ್ತಿಯಲ್ಲಿರುವ ಪಿಕಾರ್ಡ್ ಬ್ಯಾಂಕುಗಳ ಮುಖಾಂತರ ನೀಡಿರುವ ಸಾಲಕ್ಕೆ ಅಂತ ಇದ್ದುದನ್ನು ಬದಲಾವಣೆ ಮಾಡಿ ಚಿಕ್ಕಮಗಳೂರು, ಹಾಸನ, ಕೊಡಗು ಮತ್ತು ಶಿವಮೊಗ್ಗ ಜಿಲ್ಲೆಗಳ ವ್ಯಾಪ್ತಿಯಲ್ಲಿ ಬರುವ ಪಿಕಾರ್ಡ್ ಬ್ಯಾಂಕುಗಳ ಮುಖಾಂತರ ನೀಡಿರುವ ಸಾಲಕ್ಕೆ ಅಂತ ಓದಿಕೊಳ್ಳತಕ್ಕದ್ದು.

ಉಳಿದಂತೆ ಎಲ್ಲಾ ಷರತ್ತುಗಳು ಮುಂದುವರಿಯುತ್ತದೆ ಹಾಗೂ ಈಗಾಗಲೇ ನೀಡಲಾದ ರೂ.830.70 ಲಕ್ಷಗಳ ಮಿತಿಯೊಳಗೆ ಭರಿಸತಕ್ಕದ್ದು.

ದಿನಾಂಕ: 31/03/2011ರೊಳಗಾಗಿ ಈ ಖಾತೆಯಲ್ಲಿ ಉಳಿತಾಯವಾಗುವ ಹಣದ ಬಗ್ಗೆ ಅಧ್ಯರ್ಪಣಗೊಳಿಸಿ ಕ್ರಮವಿಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 137 ವೆಚ್ಚ–2/2011, ದಿನಾಂಕ: 25/03/2011ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ

ಪಿ.ಆರ್. 1126

**ಸಹಕಾರ ಸಚಿವಾಲಯ**

**ವಿಷಯ :** ಆನಂದ ಗೃಹ ಸಹಕಾರ ಸಂಘ ನಿ. ಮೈಸೂರು ಇದರ 2009–10ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ಜರುಗಿಸಲು ಕಾಲಾವಕಾಶ ನೀಡುವ ಕುರಿತು.

**ಓದಲಾಗಿದೆ :** 1. ಸಹಕಾರ ಸಂಘಗಳ ಸಹಾಯಕ ನಿಬಂಧಕರ ಆದೇಶ ಕ್ರಮಾಂಕ: 43:ಸಾಮಾನ್ಯ:ಎಕ್ಸ್‌ಜೆಎಂ:14:2010–11, ದಿನಾಂಕ: 20/09/2010.

2. ಆನಂದ ಗೃಹ ಸಹಕಾರ ಸಂಘ ನಿ., ಮೈಸೂರು ಇದರ ಅಧ್ಯಕ್ಷರ ಪತ್ರ ದಿನಾಂಕ: 17/02/2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಆನಂದ ಗೃಹ ಸಹಕಾರ ಸಂಘ ನಿ., ಮೈಸೂರು ಇದರ 2009–10ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ: 31/03/2011ರ ಒಳಗಾಗಿ ನಡೆಸಲು ಕಾಲಾವಕಾಶವನ್ನು ವಿಸ್ತರಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮೈಸೂರು ಉಪವಿಭಾಗ, ಮೈಸೂರು ಇವರು ಅನುಮತಿ ನೀಡಿರುತ್ತಾರೆ.

ಬಡಾವಣೆಯ ಕೆಲವು ಭಾಗ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರವು ವರ್ತುಲ ರಸ್ತೆಗೆ ಸ್ವಾಧೀನಪಡಿಸಿಕೊಂಡಿರುತ್ತದೆ. ಅಲ್ಲದೆ ನಗರಾಭಿವೃದ್ಧಿ ಪ್ರಾಧಿಕಾರದ ವತಿಯಿಂದ ಸಾಕಷ್ಟು ಕಾಮಗಾರಿಗಳು ಆಗಿರುವುದಿಲ್ಲ. ಇದರಿಂದಾಗಿ ಸಂಘದ ಇನ್ನೂ ಹಲವಾರು ಸದಸ್ಯರಿಗೆ ನಿವೇಶನಗಳನ್ನು ದೊರಕಿಸುವಲ್ಲಿ ಸಂಘಕ್ಕೆ ಸಾಧ್ಯವಾಗಿರುವುದಿಲ್ಲ. ಈ ಕಾರಣಗಳನ್ನು ಮನವರಿಕೆ ಮಾಡಿಕೊಳ್ಳದ ಸದಸ್ಯರು ಅನಾವಶ್ಯಕವಾಗಿ ಸಂಘದ ಮೇಲೆ ಆರೋಪಿಸುತ್ತಿದ್ದಾರೆ. ಈ ಎಲ್ಲಾ ಕೆಲಸ ಕಾರ್ಯಗಳನ್ನು ಇನ್ನೊಂದು ವರ್ಷದೊಳಗೆ ಪೂರ್ಣಗೊಳಿಸಿಕೊಡುವುದಾಗಿ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರವು ಒಪ್ಪಿಕೊಂಡಿರುತ್ತದೆ. ಕಾಮಗಾರಿ ಕೆಲಸ ಬಹುತೇಕ ಪೂರ್ಣಗೊಳ್ಳುವ ಹಂತ ತಲುಪಿದ್ದು ಅರ್ಹ ಸದಸ್ಯರಿಗೆ ನಿವೇಶನ ಹಂಚಿಕೆ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. ಅದುದರಿಂದ, ದಿನಾಂಕ: 01/04/2011 ರಿಂದ ಇನ್ನೂ ಒಂದು ವರ್ಷದ ಅವಧಿಗೆ 2009–10ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ಮುಂದೂಡಲು ಮೇಲೆ ಓದಲಾದ (2)ರ ಮನವಿಯಲ್ಲಿ ಅಧ್ಯಕ್ಷರು, ಆನಂದ ಗೃಹ ಸಹಕಾರ ಸಂಘ ನಿ., ಮೈಸೂರು ಕೋರಿರುತ್ತಾರೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 41 ಸಿಎಲ್ಎಂ 2011, ದಿನಾಂಕ: 01/04/2011**

ಪ್ರಸ್ತಾವೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಆನಂದ ಗೃಹ ಸಹಕಾರ ಸಂಘ ನಿ. ಮೈಸೂರು ಇದರ 2009–10ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ: 31/03/2012ರೊಳಗೆ ನಡೆಸಲು ಕಾಲಾವಕಾಶವನ್ನು ವಿಸ್ತರಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳನ್ನು ಮಾರ್ಪಡಿಸಿ ಅನುಮತಿ ನೀಡಲಾಗಿದೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 31/03/2012ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ರ ಪ್ರಕರಣದ ಉಪಬಂಧಗಳು ಪುನ: ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ

ಪಿ.ಆರ್. 1127

## ಸಹಕಾರ ಸಚಿವಾಲಯ

**ವಿಷಯ :** ಕೋಣಸಾಲೆ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಮದ್ದೂರು ತಾಲ್ಲೂಕು ಇದರ ವಿಶೇಷಾಧಿಕಾರಿಯವರ ಅವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರ ಆದೇಶ ಸಂಖ್ಯೆ: ಸಿಒ 175 ಸಿಎಲ್ಎಂ 2010, ಬೆಂಗಳೂರು, ದಿನಾಂಕ: 19/10/2010.

2. ಸಹಕಾರ ಸಂಘಗಳ ಅಪರ ನಿಬಂಧಕರ ಪತ್ರ ಸಂಖ್ಯೆ:ಅನಿ/ಡೇರಿ–1/84/2010–11, ದಿನಾಂಕ:24/02/2011.

**ಪ್ರಸ್ತಾವನೆ :**

ಕೋಣಸಾಲೆ ಹಾಲು ಉತ್ಪಾದಕರ ಸಹಕಾರ ಸಂಘದ ಆಡಳಿತ ಮಂಡಳಿ ಸದಸ್ಯರ ಸಾಮೂಹಿಕ ರಾಜೀನಾಮೆಯಿಂದಾಗಿ ಶೂನ್ಯತೆ ಉಂಟಾಗಿರುವುದರಿಂದ ಸಂಘದ ಆಡಳಿತ ಮಂಡಳಿಯನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 31ರಂತೆ ರದ್ದು ಪಡಿಸಿ 6 ತಿಂಗಳ ಅವಧಿಗೆ ದಿನಾಂಕ: 21/01/2009ರ ಆದೇಶದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಂಡ್ಯ ಉಪವಿಭಾಗ, ಮಂಡ್ಯರವರನ್ನು ವಿಶೇಷಾಧಿಕಾರಿಯಾಗಿ ನೇಮಿಸಿರುತ್ತಾರೆ. ತದ ನಂತರ ವಿಶೇಷಾಧಿಕಾರಿಗಳ ಅವಧಿಯನ್ನು ವಿಸ್ತರಿಸಲಾಗಿರುತ್ತದೆ. ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ನಂತರದ ಅವಧಿಯನ್ನು ದಿನಾಂಕ: 21/07/2010ರಿಂದ ದಿನಾಂಕ: 20/01/2011ರವರೆಗೆ ಕ.ಸಸ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ವಿಸ್ತರಿಸಿ ಆದೇಶಿಸಲಾಗಿರುತ್ತದೆ. ದಿನಾಂಕ: 19/12/2010ರಂದು ವಿಶೇಷಾಧಿಕಾರಿಗಳ ಸಭೆಯಲ್ಲಿ ನಿರ್ಣಯಿಸಿರುವಂತೆ. ಸಂಘದಲ್ಲಿ 18 ವರ್ಷಗಳ ಲೆಕ್ಕ ಪರಿಶೋಧನೆಯಾಗಬೇಕಾಗಿದ್ದು, ತಹಲ್ವರೆವಿಗೂ, 9 ವರ್ಷಗಳ ಲೆಕ್ಕ ಪರಿಶೋಧನೆ ಮುಕ್ತಾಯವಾಗಿದ್ದು, ಉಳಿದ 9 ವರ್ಷಗಳ ಲೆಕ್ಕ ಪತ್ರಗಳ ಪರಿಶೋಧನೆ ಬಾಕಿ ಇದ್ದು, ಈ ಎಲ್ಲಾ ವರ್ಷಗಳ ಲೆಕ್ಕ ಪರಿಶೋಧನೆ ಆದ ನಂತರವೇ ಆಡಳಿತ ಮಂಡಳಿಯನ್ನು ಪುನರ್ ರಚಿಸಬೇಕೆಂದು ಸಂಘದ ಸದಸ್ಯರು ಅಪೇಕ್ಷಿಸಿರುವುದರಿಂದ ವಿಶೇಷಾಧಿಕಾರಿಯ ಅವಧಿಯನ್ನು ಮತ್ತೊಂದು ಅವಧಿಗೆ ಅಂದರೆ, ದಿನಾಂಕ: 21/01/2011ರಿಂದ ದಿನಾಂಕ: 20/07/2011ರವರೆಗೆ ವಿಸ್ತರಿಸಿ ಆದೇಶಿಸುವಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ಅಪರ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಅಪರ ನಿಬಂಧಕರ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 56 ಸಿಎಲ್ಎಂ 2011, ಬೆಂಗಳೂರು, ದಿನಾಂಕ: 01/04/2011**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 31(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಕೋಣಸಾಲೆ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಮದ್ದೂರು ತಾಲ್ಲೂಕು ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ, ಎಂದರೆ:–

31ರ ಪ್ರಕರಣದಲ್ಲಿ

(1)ನೇ ಉಪಪ್ರಕರಣದಲ್ಲಿರುವ "ಒಂದು ವರ್ಷ" ಎಂಬ ಪದಗಳಿಗೆ ಬದಲಾಗಿ "ಇಪ್ಪತ್ತ ನಾಲ್ಕು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

ಸೂಚನೆ:– ಪ್ರಕರಣ 31 ಉಪ–ಪ್ರಕರಣ (1) ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 21/07/2011 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 31 ಉಪ–ಪ್ರಕರಣ (1)ರಲ್ಲಿನ ಉಪಬಂಧಗಳು ಪುನ: ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್.ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. 1128

## ಸಹಕಾರ ಸಚಿವಾಲಯ

ಸಂಖ್ಯೆ: ಸಿಒ 175 ಸಿಎಲ್ಎಸ್ 2010, ಬೆಂಗಳೂರು, ದಿನಾಂಕ: 28/03/2011

**ತಿದ್ದುಪಡಿ ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಒ 175 ಸಿಎಲ್ಎಸ್ 2010, ಬೆಂಗಳೂರು, ದಿನಾಂಕ: 27/11/2010 ಅನ್ನು ಭಾಗಶ: ತಿದ್ದುಪಡಿ ಮಾಡಿ ಈ ಆದೇಶದ ಭಾಗ– IIರಲ್ಲಿ ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿಯಮಿತ ಇದಕ್ಕೆ ಸಂಬಂಧಪಟ್ಟಂತೆ ಚಿಕ್ಕಮಗಳೂರು, ಹಾಸನ ಮತ್ತು ಕೊಡಗು ಜಿಲ್ಲೆಗಳ ವ್ಯಾಪ್ತಿಯಲ್ಲಿರುವ ಪಿಕಾರ್ಡ್ ಬ್ಯಾಂಕುಗಳ ಮುಖಾಂತರ ನೀಡಿರುವ ಸಾಲಕ್ಕೆ ಅಂತ ಇದ್ದುದನ್ನು ಬದಲಾವಣೆ ಮಾಡಿ ಚಿಕ್ಕಮಗಳೂರು, ಹಾಸನ, ಕೊಡಗು ಮತ್ತು ಶಿವಮೊಗ್ಗ ಜಿಲ್ಲೆಗಳ ವ್ಯಾಪ್ತಿಯಲ್ಲಿ ಬರುವ ಪಿಕಾರ್ಡ್ ಬ್ಯಾಂಕುಗಳ ಮುಖಾಂತರ ನೀಡಿರುವ ಸಾಲಕ್ಕೆ ಅಂತ ಓದಿಕೊಳ್ಳತಕ್ಕದ್ದು.

ಉಳಿದಂತೆ ಎಲ್ಲಾ ಷರತ್ತುಗಳು ಮುಂದುವರಿಯುತ್ತದೆ ಹಾಗೂ ಈಗಾಗಲೇ ನೀಡಲಾದ ರೂ.830.70 ಲಕ್ಷಗಳ ಮಿತಿಯೊಳಗೆ ಭರಿಸತಕ್ಕದ್ದು.

ದಿನಾಂಕ: 31/03/2011ರೊಳಗಾಗಿ ಈ ಖಾತೆಯಲ್ಲಿ ಉಳಿತಾಯವಾಗುವ ಹಣದ ಬಗ್ಗೆ ಅಧ್ಯರ್ಪಣಗೊಳಿಸಿ ಕ್ರಮವಿಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 137 ವೆಚ್ಚ–2/2011, ದಿನಾಂಕ: 25/03/2011ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್.ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. 1129

## ಸಾರ್ವಜನಿಕ ಉದ್ದಿಮೆಗಳ ಸಚಿವಾಲಯ

**ವಿಷಯ :** ಸಾರ್ವಜನಿಕ ಉದ್ದಿಮೆಗಳಿಗೆ 2010–11ನೇ ಆರ್ಥಿಕ ವರ್ಷದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಗಳ "ವಾರ್ಷಿಕ ರತ್ನ ಪ್ರಶಸ್ತಿ" ಪ್ರಧಾನ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರ ಆದೇಶ ಸಂಖ್ಯೆ: ಸಾಉಇ 38 ಎಂಎಸ್‌ಐ 2008, ದಿನಾಂಕ: 05/4/2010.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಾಉಇ 22 ಎಂಎಸ್‌ಐ 2010, ದಿನಾಂಕ: 09/02/2011.
3. ದಿನಾಂಕ: 08/03/2011 ಮತ್ತು 15/03/2011ರಂದು ನಡೆದ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಲೆಕ್ಕ ಶೀರ್ಷಿಕೆ 3451–00–091–0–01–015ರಲ್ಲಿ ಐದು ಸಾರ್ವಜನಿಕ ಉದ್ದಿಮೆಗಳಿಗೆ ಸನ್ಮಾನ್ಯ ಮುಖ್ಯ ಮಂತ್ರಿಯವರ ವಾರ್ಷಿಕ ರತ್ನ ಪ್ರಶಸ್ತಿಯನ್ನು ನೀಡಲು ರೂ.5–00 ಲಕ್ಷ (ರೂಪಾಯಿ ಐದು ಲಕ್ಷಗಳು ಮಾತ್ರ) ಗಳನ್ನು ಆಯವ್ಯಯದಲ್ಲಿ ಒದಗಿಸಲಾಗಿತ್ತು.

ಕರ್ನಾಟಕ ಸಾರ್ವಜನಿಕ ಉದ್ದಿಮೆಗಳ ಕಾರ್ಯದಕ್ಷತೆಯನ್ನು ಹೆಚ್ಚಿಸಲು ಉತ್ತೇಜನ ನೀಡುವ ಸಲುವಾಗಿ ಸನ್ಮಾನ್ಯ ಮುಖ್ಯ ಮಂತ್ರಿಯವರ ವಾರ್ಷಿಕ ರತ್ನ ಪ್ರಶಸ್ತಿಯನ್ನು ಪ್ರದಾನ ಮಾಡಲು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಾರ್ವಜನಿಕ ಉದ್ದಿಮೆಗಳ ಇಲಾಖೆ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ಮೇಲೆ (2)ರಲ್ಲಿ ಓದಲಾದ ಅಧಿಸೂಚನೆಯ ರೀತ್ಯ ರಚಿಸಲಾಗಿತ್ತು. ಈ ಕುರಿತು ದಿನಾಂಕ: 08/03/2011 ಮತ್ತು ದಿನಾಂಕ: 15/03/2011ರಂದು ಸಭೆ ಸೇರಿ ಅತ್ಯುತ್ತಮವಾಗಿ ಕಾರ್ಯನಿರ್ವಹಿಸಿದ ಈ ಕೆಳಕಂಡ ಸಾರ್ವಜನಿಕ ಉದ್ದಿಮೆಗಳಿಗೆ ತಲಾ ಒಂದು ಲಕ್ಷ ರೂಪಾಯಿಗಳನ್ನು ಒಳಗೊಂಡ ಸನ್ಮಾನ್ಯ ಮುಖ್ಯ ಮಂತ್ರಿಯವರ ವಾರ್ಷಿಕ ರತ್ನ ಪ್ರಶಸ್ತಿ ನೀಡಲು ಸಮಿತಿ ಆಯ್ಕೆ ಮಾಡಿದೆ.

| | | | |
|---|---|---|---|
| 1. | ಉತ್ಪಾದನಾ ಕ್ಷೇತ್ರ | : | ಮೈಸೂರು ಪೇಯಿಂಟ್ಸ್ ಮತ್ತು ವಾರ್ನಿಷ್ ಲಿಮಿಟೆಡ್, ಮೈಸೂರು. |
| 2. | ಅರಣ್ಯ ಕ್ಷೇತ್ರ | : | ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು. |
| 3. | ಖನಿಜ ಕ್ಷೇತ್ರ | : | ಮೈಸೂರು ಮಿನರಲ್ಸ್ ಲಿಮಿಟೆಡ್, ಬೆಂಗಳೂರು. |
| 4. | ಮಾರುಕಟ್ಟೆ ಮತ್ತು ವ್ಯಾಪಾರ ಕ್ಷೇತ್ರ | : | ಕರ್ನಾಟಕ ರೇಷ್ಮೆ ಉದ್ದಿಮೆಗಳ ನಿಗಮ, ಬೆಂಗಳೂರು. |
| 5. | ಸಾಮಾಜಿಕ ಕ್ಷೇತ್ರ | : | ಕರ್ನಾಟಕ ಷೆಡ್ಯೂಲ್ ಟ್ರೈಬ್ಸ್ ಡೆವಲಪ್‌ಮೆಂಟ್ ಕಾರ್ಪೋರೇಷನ್, ಬೆಂಗಳೂರು. |

ಅದರಂತೆ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಾಉಇ 22 ಎಂಎಸ್‌ಐ 2011 ಬೆಂಗಳೂರು, ದಿನಾಂಕ: 15/03/2011**

ಮೇಲೆ ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ ಅತ್ಯುತ್ತಮವಾಗಿ ಕಾರ್ಯನಿರ್ವಹಿಸಿದ ಐದು ಸಾರ್ವಜನಿಕ ಉದ್ದಿಮೆಗಳಿಗೆ 2010–11ನೇ ಸಾಲಿನಲ್ಲಿ ಒಂದು ಸಾರ್ವಜನಿಕ ಉದ್ದಿಮೆಗೆ ತಲಾ ಒಂದು ಲಕ್ಷ ರೂಪಾಯಿಯಂತೆ ಸನ್ಮಾನ್ಯ ಮುಖ್ಯ ಮಂತ್ರಿಯವರ ವಾರ್ಷಿಕ ರತ್ನ ಪ್ರಶಸ್ತಿಯನ್ನು ಪ್ರದಾನ ಮಾಡಲು ಸರ್ಕಾರ ಮಂಜೂರಾತಿ ನೀಡಿದೆ.

ಈ ಬಗ್ಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 3451–00–091–0–01ರಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಎಫ್. ಹುಬ್ಬಳ್ಳಿ**
ಸರ್ಕಾರದ ಅಧೀನ ಕಾರ್ಯದರ್ಶಿ–2
ಸಾರ್ವಜನಿಕ ಉದ್ದಿಮೆಗಳ ಇಲಾಖೆ

ಪಿ.ಆರ್. 1130

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ವಿಠ್ಠಲ ಪರಸಪ್ಪ ರೇವಡಿಗಾರ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :**
1. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಲ್–38/ಸಿಆರ್–04/2009, ಬಿಜಿಕೆಟಿ ದಿನಾಂಕ: 12–01–2011.
2. ತನಿಖಾಧಿಕಾರಿಯವರ ವರದಿ ದಿನಾಂಕ: 01–12–2010.
3. ತನಿಖಾ ದಾಖಲೆಗಳಾದ ನೆರಳಚ್ಚು ಪ್ರತಿ, ಪ್ರಥಮ ವರ್ತಮಾನ ವರದಿಯ ಪ್ರತಿ, ಟ್ರ್ಯಾಪ್ ಪೂರ್ವದ ಮಹಜರ್, ಟ್ರ್ಯಾಪ್‌ನ ನಡವಳಿಗಳು, ರಾಸಾಯನಿಕ ಪರೀಕ್ಷಕರ ವರದಿ, ವಶಪಡಿಸಿಕೊಂಡ ದಾಖಲೆಗಳ ಪ್ರತಿ, ಕೃತ್ಯ ನಡೆದ ಸ್ಥಳದ ನಕ್ಷೆ, ದಾಖಲೆಗಳ ಪ್ರತಿಗಳು ಮತ್ತು ಸಾಕ್ಷಿಗಳ ಹೇಳಿಕೆಗಳು.

ಪ್ರಸ್ತಾವನೆ :

ಶ್ರೀ ವಿಠ್ಠಲ ಪರಸಪ್ಪ ರೇವಡಿಗಾರ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಬಾಗಲಕೋಟೆ, ಇವರ ವಿರುದ್ಧ ಗುನ್ನೆ ಸಂಖ್ಯೆ: 04/2009 ರಲ್ಲಿ ಪೊಲೀಸ್ ನಿರೀಕ್ಷಕರು ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ, ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯವರ

ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ: (1)ರ ಪತ್ರ ದಿನಾಂಕ: 12-01-2011 ರೊಡನೆ ಕಳುಹಿಸುತ್ತಾ, ಆಪಾದಿತ ಅಧಿಕಾರಿಯವರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಮಂಜೂರಾತಿಗಾಗಿ ಸಕ್ಷಮ ಪ್ರಾಧಿಕಾರವಾದ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ದಿನಾಂಕ: 12–01–2011ರ ಪತ್ರದೊಡನೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ.

1) ಶ್ರೀ ಅರವಿಂದ ಲಕ್ಷಣ ನಾಯಕ, 28 ವರ್ಷ, ವ್ಯಾಪಾರಸ್ಥರು, ವಿನಾಯಕ ನಗರ, ಬಾಗಲಕೋಟೆರವರ ದೂರು ದಿನಾಂಕ: 21–08–2009.

2) ಪ್ರಥಮ ವರ್ತಮಾನ ವರದಿ: ಬಾಗಲಕೋಟೆ ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣದ ಸಂಖ್ಯೆ: 04/2009.

3) ಪ್ರಾಯೋಗಿಕ ಪಂಚನಾಮೆ ದಿನಾಂಕ: 21–08–2009.

4) ಟ್ರ್ಯಾಪ್‌ನ ಮಹಜರ್ ದಿನಾಂಕ: 21–08–2009.

5) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: ಪಿಹೆಚ್‌ಐ/ ಸಿಎಂಇ/ ಲೋಕ್/97/09–10 ದಿನಾಂಕ: 02–09–2009.

6) ಕೃತ್ಯ ನಡೆದ ಸ್ಥಳದ ನಕಾಶೆ

**1) ಸಾಕ್ಷಿ ಹೇಳಿಕೆಗಳ ಪಟ್ಟಿ:**

1. ಶ್ರೀ ಅರವಿಂದ, ತಂದೆ: ಲಕ್ಷಣ ನಾಯಕ, ವಯಸ್ಸು 28 ವರ್ಷ ಉದ್ಯೋಗ; ಕಂಟ್ರಾಕ್ಟರ್, ವಿನಾಯಕ ನಗರ, ಬಾಗಲಕೋಟೆ.
2. ಶ್ರೀ ಸಿದ್ಧಾರೂಢ, ಪ್ರಥಮ ದರ್ಜೆ ಸಹಾಯಕ, ಸರ್ಕಾರಿ ಪಾಲಿಟೆಕ್ನಿಕ್, ಬಾಗಲಕೋಟೆ.
3. ಶ್ರೀ ಮಹೇಶ ಪ್ರಾಣೇಶ ದೇಸಾಯಿ, ದ್ವಿ.ದ.ಸ. ಗ್ರಾಮೀಣಾಭಿವೃದ್ಧಿ ಪಂಚಾಯತ್ ರಾಜ್ ಇಂಜಿನಿಯರಿಂಗ್, ಯೋಜನಾ ಉಪ ವಿಭಾಗ, ಬಾಗಲಕೋಟೆ.
4. ಶ್ರೀ ಮಳಿಯಪ್ಪ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ಬಾಗಲಕೋಟೆ.
5. ಶ್ರೀ ಸಿದ್ದಲಿಂಗಪ್ಪ, ಪ್ರ.ದ.ಸ. ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ಬಾಗಲಕೋಟೆ.
6. ಶ್ರೀ ಅಬ್ದುಲ್‌ಸಾಬ, ಪ್ರ.ದ.ಸ. ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ಬಾಗಲಕೋಟೆ.
7. ಶ್ರೀ ಯಲ್ಲಪ್ಪ, ಪ್ರ.ದ.ಸ. ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ಬಾಗಲಕೋಟೆ.
8. ಶ್ರೀಮತಿ ಸರೋಜ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ಬಾಗಲಕೋಟೆ.
9. ಶ್ರೀ ಹಣಮಂತ, ಎ.ಇ., ಲೋಕೋಪಯೋಗಿ ಇಲಾಖೆ, ಬಾಗಲಕೋಟೆ.
10. ಶ್ರೀ ಬಿ.ಎಂ. ಅಂಕೂಲಿ, ಹೆಚ್.ಸಿ. ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ.
11. ಶ್ರೀ ಐ.ಎಂ.ಸಿ. ದುಂಡಸಿ, ಸಿಪಿಸಿ, ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ.
12. ಶ್ರೀ ಎಸ್.ಐ. ಬಿಳೇಕುದುರಿ, ಸಿಪಿಸಿ, ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ.
13. ಶ್ರೀ ಎಸ್.ಎಂ.ಆಕಳವಾಡಿ, ವಾಹನ ಚಾಲಕ, ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ.
14. ಶ್ರೀ ಆರ್.ಎಂ. ಚೌವಲಕರ, ದಲಾಯತ್, ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ.
15. ಶ್ರೀ ಎಸ್.ಪಿ. ಇನಾಮದಾರ, ಸಿಪಿಸಿ, ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ.
16. ಶ್ರೀ ಕೆ.ವಿ. ಕುಲಕರ್ಣಿ, ಸಿಹೆಚ್‌ಸಿ, ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ.
17. ಶ್ರೀ ಹೆಚ್.ಎಸ್. ಸೋಲಾಪೂರ, ಸಿಹೆಚ್‌ಸಿ, ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ.
18. ಶ್ರೀ ಬಿ.ಜಿ. ಶೇಷಗಿರಿ, ಕರ್ನಾಟಕ ಸರ್ಕಾರ ಸಹಾಯಕ ರಸಾಯನಿಕ ಪರಿವೀಕ್ಷಕರು, ಬೆಂಗಳೂರು.
19. ಶ್ರೀ ಮಲ್ಲೇಶಿ ದೊಡ್ಡಮನಿ, ಪಿಐ, ಕರ್ನಾಟಕ ಲೋಕಾಯುಕ್ತ, ಬಿಜಾಪುರ ಪ್ರಭಾರ ಬಾಗಲಕೋಟೆ.
20. ಶ್ರೀ ಎ.ಎಸ್. ಭೂಮರೆಡ್ಡಿ, ಪಿಐ, ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ.

ಫಿರ್ಯಾದುದಾರರಾದ ಶ್ರೀ ಅರವಿಂದ ಲಕ್ಷಣ ನಾಯಕ, ವಿನಾಯಕ ನಗರ, ಬಾಗಲಕೋಟೆರವರು ದಿನಾಂಕ: 21–08–2009 ರಂದು ಬಾಗಲಕೋಟೆ ಲೋಕಾಯುಕ್ತ ಪೊಲೀಸ್ ಠಾಣೆಗೆ ಹಾಜರಾಗಿ, ಶ್ರೀ ಶಾಹು ಬಾಳುಬಾ ಜಾಧವ, ವಾಣಿಜ್ಯ ತೆರಿಗೆ ಪರಿವೀಕ್ಷಕರು, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ವಾಣಿಜ್ಯ ತೆರಿಗೆ ಇಲಾಖೆ, ಬಾಗಲಕೋಟೆ, ಇವರು ತಾನು ಸಿವಿಲ್ ಕಂಟ್ರಾಕ್ಟರ್ ಲೈಸೆನ್ಸ್ ಪಡೆಯಲು ಅಗತ್ಯವಾಗಿದ್ದ ಟಿನ್ ಸಂಖ್ಯೆಯನ್ನು ನೀಡುವ ಸಲುವಾಗಿ, ರೂ. 900/– ಅಕ್ರಮ ಸಂಭಾವನೆಯನ್ನು ಕೇಳುತ್ತಿರುವ ಬಗ್ಗೆ ಹಾಗೂ ತನಗೆ ಲಂಚ ಕೊಡಲು ಇಷ್ಟವಿಲ್ಲದ್ದರಿಂದ ಸದರಿ ಆರೋಪಿತರ ಮೇಲೆ ಸೂಕ್ತ ಕಾನೂನು ಕ್ರಮ ಕೈಗೊಳ್ಳುವಂತೆ ಲಿಖಿತ ದೂರನ್ನು ಕೊಟ್ಟಿರುತ್ತಾರೆ.

ಮೇಲ್ಕಂಡ ಲಿಖಿತ ದೂರನ್ನು ಆಧರಿಸಿ, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆರವರು ಸದರಿ ಆರೋಪಿತ ಸರ್ಕಾರಿ ಅಧಿಕಾರಿಯವರ ಮೇಲೆ ಭ್ರಷ್ಟಾಚಾರ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಸಹ ಕಲಂ 13(2)ರ ಅಡಿಯಲ್ಲಿ ಮೊಕದ್ದಮೆ ಸಂಖ್ಯೆ: 4/2009 ಪ್ರಕರಣವನ್ನು ದಿನಾಂಕ: 21–08–2009 ರಂದು ದಾಖಲಿಸಿಕೊಂಡು ತನಿಖೆಯನ್ನು ಕೈಗೊಂಡಿರುತ್ತಾರೆ.

ಬಾಗಲಕೋಟೆ, ಲೋಕಾಯುಕ್ತ ಪೊಲೀಸ್ ಠಾಣೆ, ಮೊಕದ್ದಮೆ ಸಂಖ್ಯೆ: 4/2009ರ ಸಂಬಂಧ ತನಿಖಾಧಿಕಾರಿಯವರಾದ ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ, ಇವರು ಈ ಪ್ರಕರಣದ ತನಿಖೆಯನ್ನು ಪೂರ್ಣಗೊಳಿಸಿ, ಸಲ್ಲಿಸಿರುವ ಅಂತಿಮ ತನಿಖಾ ವರದಿಯ ಪರಿಶೀಲನೆಯಿಂದ ಆಪಾದಿತ–1 ಶ್ರೀ ಶಾಹು ಬಾಳುಬಾ ಜಾಧವ, ವಾಣಿಜ್ಯ ತೆರಿಗೆ ಪರಿವೀಕ್ಷಕರು, ಮತ್ತು ಆಪಾದಿತ–2 ಶ್ರೀ ವಿಠ್ಠಲ ಪರಸಪ್ಪ ರೇವಡಿಗಾರ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರುಗಳ ವಿರುದ್ಧ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1)(ಡಿ) ಸಹವಾಚನ 13(2)ರ ಅಡಿಯಲ್ಲಿ ಮಾಡಿರುವ ಆಪಾದನೆಗಳು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ ಆದ್ದರಿಂದ ಸದರಿ ಆಪಾದಿತರುಗಳು

ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಲು ಅರ್ಹರಾಗಿರುತ್ತಾರೆ. ಅವರನ್ನು ಅಭಿಯೋಜನೆಗೆ ಒಳಪಡಿಸಲು ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಅಗತ್ಯವಾಗಿರುತ್ತದೆ. ಆದ್ದರಿಂದ ಶ್ರೀ ವಿಠ್ಠಲ ಪರಸಪ್ಪ ರೇವಡಿಗಾರ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಬಾಗಲಕೋಟೆ, ಇವರನ್ನು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1)(ಡಿ) ಸಹವಾಚನ 13(2)ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19(1)(ಬಿ) ರನ್ವಯ ಮಂಜೂರಾತಿಯನ್ನು ನೀಡಲು ಲೋಕಾಯುಕ್ತ ಪೊಲೀಸರು ಕೋರಿರುತ್ತಾರೆ.

ಆಪಾದಿತ–1 ಶ್ರೀ ಶಾಹು ಬಾಳುಬಾ ಜಾಧವ, ವಾಣಿಜ್ಯ ತೆರಿಗೆ ಪರಿವೀಕ್ಷಕರು, ಬಾಗಲಕೋಟೆ, ಇವರನ್ನು ಅಭಿಯೋಗಗೊಳಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19(1)(ಸಿ) ರನ್ವಯ ಮಂಜೂರಾತಿಯನ್ನು ನೀಡಲು ವಾಣಿಜ್ಯ ತೆರಿಗೆಗಳ ಆಯುಕ್ತರಿಗೆ ಪ್ರತ್ಯೇಕವಾಗಿ ಪತ್ರ ಮುಖೇನ ಕೋರಲಾಗಿದೆ ಎಂದು ತಿಳಿಸಿರುತ್ತಾರೆ.

ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ರಾಸಾಯನಿಕ ಪರೀಕ್ಷಕರ ವರದಿ, ಕೃತ್ಯನಡೆದ ಸ್ಥಳದ ನಕ್ಷೆ, ಆರೋಪಿತರ ಸೇವಾ ವಿವರಗಳು, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇದರಿಂದಾಗಿ ಶ್ರೀ ವಿಠ್ಠಲ ಪರಸಪ್ಪ ರೇವಡಿಗಾರ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಬಾಗಲಕೋಟೆ, ಇವರ ಮೇಲಿನ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡುಬರುತ್ತದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ 1988ರ ಕಲಂ 7.13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ 7.13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯಕವೆಂದು ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತ ಅಧಿಕಾರಿಯನ್ನು ಕೆಲಸದಿಂದ ತೆಗೆದುಹಾಕುವ ಅಧಿಕಾರವನ್ನು ಹೊಂದಿರುತ್ತದೆ. ಆದ್ದರಿಂದ ಲಂಚ ನಿರೋಧ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಆಪಾದಿತ ಅಧಿಕಾರಿಯಾದ ಶ್ರೀ ವಿಠ್ಠಲ ಪರಸಪ್ಪ ರೇವಡಿಗಾರ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 7 ಮತ್ತು 13(1)(ಡಿ)ಜೊತೆಗೆ 13(2) ರಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 5 ವಾತೆತ 2011, ಬೆಂಗಳೂರು, ದಿನಾಂಕ : 29–03–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಆರ್. ಚಂದ್ರಶೇಖರಾರಾಧ್ಯ, ಪೀಠಾಧಿಕಾರಿ, ಆರ್ಥಿಕ ಇಲಾಖೆ, ವಾಣಿಜ್ಯ ತೆರಿಗೆ–2 ಶಾಖೆ ಆದ ನಾನು ಆಪಾದಿತ ಅಧಿಕಾರಿಯಾದ ಶ್ರೀ ವಿಠ್ಠಲ ಪರಸಪ್ಪ ರೇವಡಿಗಾರ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಬಾಗಲಕೋಟೆ, ಇವರನ್ನು ಲಂಚ ನಿರೋಧಕ ಕಾಯ್ದೆ 1988 ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2) ರಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ನಿಯಮ 18ರ ಪ್ರಕಾರ, ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ: 29–03–2011 ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ಆರ್. ಚಂದ್ರಶೇಖರಾರಾಧ್ಯ**

ಪೀಠಾಧಿಕಾರಿ,

ಪಿ.ಆರ್. 1141 ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಪಿಂಟೂ ನಾರಾಯಣ ನಾಯಕ್, ನಿವೃತ್ತ ಎ.ಹೆಚ್.ಸಿ. ಡಿ.ಎ.ಆರ್. ಕೊಪ್ಪಳ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೊಪ್ಪಳ, ಇವರ ಆದೇಶ ಸಂಖ್ಯೆ: ಸಿಬ್ಬಂದಿ (4)ಇವಿ/2008 ಓ.ಬಿ. 740/09 ದಿನಾಂಕ: 07–09–2009.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಅಪೀಲು/44/ಈವ/2009 (ಓ.ಬಿ. 30/ಈವ/2010/283) ದಿನಾಂಕ 13–01–2010.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 24–02–2010.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)93/2009–10 ದಿನಾಂಕ 04–02–2011.

**ಪ್ರಸ್ತಾವನೆ :**

ಶ್ರೀ ಪಿಂಟೂ ನಾರಾಯಣ ನಾಯ್ಕ ಇವರು ಜಿಲ್ಲಾ ಸಶಸ್ತ್ರ ಪಡೆ, ಕೊಪ್ಪಳದಲ್ಲಿ ಹೆಡ್ ಕಾನ್ಸ್‌ಟೇಬಲ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ

ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ದಿನಾಂಕ: 08-10-2008 ರಂದು ಆರ್.ಪಿ.ಐ., ಡಿ.ಎ.ಆರ್. ಕೊಪ್ಪಳ ರವರ ಆದೇಶದ ಮೇರೆಗೆ ನಿಮ್ಮನ್ನು ಕೊಪ್ಪಳ ಜಿಲ್ಲಾ ನಿಸ್ತಂತು ಘಟಕಕ್ಕೆ ಸ್ಟಾಂಡ್ ಬೈ ಕರ್ತವ್ಯಕ್ಕಾಗಿ ಇತರ ಸಿಬ್ಬಂದಿಗಳೊಂದಿಗೆ ಕರ್ತವ್ಯ ನಿರ್ವಹಿಸಲು ಡಿ.ಎ.ಆರ್. ಕರ್ತವ್ಯ ನಿರತ ಅಧಿಕಾರಿಗಳು ನೇಮಕಮಾಡಿ ಕಳಿಸಿದ್ದು ನೀವು ದಿನಾಂಕ 19-10-2008 ರಿಂದ ನಿಸ್ತಂತು ಸ್ಟಾಂಡ್ ಬೈ ಪಾರ್ಟಿ ಕರ್ತವ್ಯದಿಂದ ಹೇಳದೇ ಕೇಳದೇ ಯಾವುದೇ ಮಾಹಿತಿಯನ್ನು ಮೇಲಾಧಿಕಾರಿಗಳಿಗೆ ತಿಳಿಸದೆ ಇಲ್ಲಿಯವರೆಗೂ ಕರ್ತವ್ಯಕ್ಕೆ ಗೈರುಹಾಜರಾಗಿದ್ದು ಅಲ್ಲದೇ ನೀವು ಈ ಹಿಂದೆ ಅನೇಕ ಬಾರಿ ನೇಮಿಸಿದ ಗಾರ್ಡ್ ಕರ್ತವ್ಯ ಬಂದೋಬಸ್ತ್ ಕರ್ತವ್ಯದಲ್ಲಿ ಮಫ್ತಿ ಧರಿಸಿಕೊಂಡು ತಿರುಗಾಡುವುದು ಮತ್ತು ಮೇಲಧಿಕಾರಿಗಳೊಂದಿಗೆ ಅಶಿಸ್ತು ಅಸಭ್ಯ ರೀತಿಯಿಂದ ವರ್ತಿಸುವುದು, ಕರ್ತವ್ಯಕ್ಕೆ ಮದ್ಯಪಾನ ಮಾಡಿ ಬರುವುದು, ಪ್ರಸ್ತುತ 2008ನೇ ಸಾಲಿನಲ್ಲಿ 87 ದಿವಸ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಬೇಜವಾಬ್ದಾರಿತನ ಮಾಡಿದ್ದು ಇದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೊಪ್ಪಳ, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 07-09-2009ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲಾಗಿದೆ. ದಿನಾಂಕ 19-10-2008 ರಿಂದ 14-04-2009 ರವರೆಗೆ ಒಟ್ಟು 178 ದಿನಗಳ ಅನಧಿಕೃತ ಗೈರುಹಾಜರಾದ ಅವಧಿಯನ್ನು ಕೆ.ಸಿ.ಎಸ್. ನಿಯಮ 106(ಎ) ಪ್ರಕಾರ ವೇತನ ರಹಿತ ರಜೆ ಎಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 13-01-2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 45 ಪೊಸಿಅ 2010 ಬೆಂಗಳೂರು, ದಿನಾಂಕ : 19-04-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪಿಂಟೂ ನಾರಾಯಣ ನಾಯಕ್, ನಿವೃತ್ತ ಎ.ಹೆಚ್.ಸಿ. ಡಿ.ಎ.ಆರ್. ಕೊಪ್ಪಳ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1142 ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಎಸ್. ರಾಘವೇಂದ್ರ, ಪಿ.ಎಸ್.ಐ., ಕಾರವಾರ ಟೌನ್ ಪೊಲೀಸ್ ಠಾಣೆ, ಕಾರವಾರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕಾರವಾರ, ಇವರ ಆದೇಶ ಸಂಖ್ಯೆ: ಸಿಬ್ಬಂದಿ (2)ಪಿಆರ್/33/09 (ಓ.ಬಿ. 701/2009) ದಿನಾಂಕ: 23-10-2009.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್ ಪಶ್ಚಿಮ ವಲಯ, ಮಂಗಳೂರು, ಇವರ ಆದೇಶ ಸಂಖ್ಯೆ: ಸಿಬ್ಬಂದಿ 3/ಮೇಲ್ಮನವಿ/01/ಪ.ವ/2010 ದಿನಾಂಕ 14-04-2010.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 30-08-2010.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)53/2010-11 ದಿನಾಂಕ 19-10-2010.

ಪ್ರಸ್ತಾವನೆ :

ಶ್ರೀ ಎಸ್. ರಾಘವೇಂದ್ರ, ಪಿ.ಎಸ್.ಐ., ಕಾರವಾರ ಟೌನ್ ಪೊಲೀಸ್ ಠಾಣೆ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಶ್ರೀ ರಾಘವೇಂದ್ರ ಎಸ್., ಆದ ನೀವು ಕಾರವಾರ ನಗರ ಪೊಲೀಸ್ ಠಾಣೆಯಲ್ಲಿ ಕಾನೂನು ಮತ್ತು ಸುವ್ಯವಸ್ಥೆಯ ಪಿ.ಎಸ್.ಐ. ಆಗಿ ಕರ್ತವ್ಯ ನಿರ್ವಹಿಸುತ್ತಿರುವಿರಿ. ದಿನಾಂಕ 22–07–2009 ರಂದು ಕಾರವಾರ ನಗರದಲ್ಲಿ ಓ.ಸಿ. ಮಟಕಾ, ಅಮೃತ ಹೋಟೆಲ್ ಎದುರು ರಸ್ತೆಯ ಐ.ಸಿ.ಐ.ಸಿ.ಐ. ಬ್ಯಾಂಕಿನ ಎದುರುಗಡೆ ನಡೆಯುತ್ತಿರುವ ಬಗ್ಗೆ ಸುಳಿವು ದೊರೆತಂತೆ ಪಿ.ಐ. ಡಿ.ಸಿ.ಐ.ಬಿ. ಕಾರವಾರರವರು ದಾಳಿ ನಡೆಸಿ ಮೂವರನ್ನು ದಸ್ತಗಿರಿ ಮಾಡಿರುತ್ತಾರೆ ಮತ್ತು ರೂ. 3820–00 ನಗದು ಹಣ ಮತ್ತು ಓ.ಸಿ, ಆಟದ ಪರಿಕರಗಳನ್ನು ವಶಪಡಿಸಿಕೊಂಡಿರುತ್ತಾರೆ. ನೀವು ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿ, ನಿಮ್ಮ ಠಾಣಾ ವ್ಯಾಪ್ತಿಯಲ್ಲಿ ಮಟ್ಕಾ ಜೂಜಾಟ ನಡೆಯುತ್ತಿದ್ದರೂ ನೀವು ಯಾವುದೇ ಕ್ರಮಕೈಗೊಳ್ಳದೇ ತಟಸ್ಥರಾಗಿದ್ದು ಕರ್ತವ್ಯದಲ್ಲಿ ತೀವ್ರ ರೀತಿಯ ನಿರ್ಲಕ್ಷತನ ಹಾಗೂ ಬೇಜವಾಬ್ದಾರಿತನ ತೋರಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕಾರವಾರ, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 23–10–2009ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 6 ತಿಂಗಳ ಕಾಲ ತದನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್ ಪಶ್ಚಿಮ ವಲಯ, ಮಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 14–04–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 140 ಪೊಸಿಅ 2010 ಬೆಂಗಳೂರು, ದಿನಾಂಕ : 19–04–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್. ರಾಘವೇಂದ್ರ, ಪಿ.ಎಸ್.ಐ., ಕಾರವಾರ ಟೌನ್ ಪೊಲೀಸ್ ಠಾಣೆ, ಕಾರವಾರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1143 ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎ. ಕೃಷ್ಣಪ್ಪ, ಎ.ಎಸ್.ಐ., ನಾಯಕನಹಟ್ಟಿ ಪೊಲೀಸ್ ಠಾಣೆ, ಚಿತ್ರದುರ್ಗ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಚಿತ್ರದುರ್ಗ, ಇವರ ಆದೇಶ ಸಂಖ್ಯೆ: ಸಿಬ್ಬಂದಿ (2)ಪಿಆರ್/160/2009 (ಓ.ಬಿ.ನಂ. 481/2009–10) ದಿನಾಂಕ: 17–11–2009.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ: 54/ಅಪೀಲು/ಸಿಬ್ಬಂದಿ–2/09–10 (ಓ.ಬಿ. 46/2010–11) ದಿನಾಂಕ 28–04–2010.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 23–06–2010.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)35/2010–11 ದಿನಾಂಕ 27–01–2011.

**ಪ್ರಸ್ತಾವನೆ :**

ಶ್ರೀ ಎ. ಕೃಷ್ಣಪ್ಪ, ಎ.ಎಸ್.ಐ., ನಾಯಕನಹಟ್ಟಿ ಪೊಲೀಸ್ ಠಾಣೆ, ಚಿತ್ರದುರ್ಗ ಜಿಲ್ಲೆ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಘೋರ ನಿರ್ಲಕ್ಷತೆ ಮತ್ತು ಅತೀವ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿ ದಿನಾಂಕ: 28–08–2009 ರಂದು ಠಾಣೆಯ ಪ್ರಭಾರದಲ್ಲಿರುವಾಗ ಜಗಳೂರು ಸರ್ಕಾರಿ ಆಸ್ಪತ್ರೆಯಿಂದ ಮೆಮೋ ಸ್ವೀಕರಿಸಿ ಆಸ್ಪತ್ರೆಗೆ ಭೇಟಿ ನೀಡಿ ಒಳರೋಗಿಯಾಗಿ ದಾಖಲಾದ ಮಹಿಳೆ ಕರಿಯಮ್ಮ, ಇವರು ಗಲಾಟೆಯಲ್ಲಿ ಗಾಯಗೊಂಡಿದ್ದು ಸದರಿಯವರಿಂದ ಕಾಗ್ನಿಜಬಲ್ ದೂರನ್ನು ಸ್ವೀಕರಿಸಿ ಪ್ರಕರಣ ದಾಖಲಿಸಿಕೊಂಡು ತನಿಖೆ ಕೈಗೊಳ್ಳದೆ ರಕ್ತ ಗಾಯವಾಗಿದ್ದನ್ನು ಪರಿಶೀಲಿಸಿಯೂ ಸಹ ನೊಂದ ಮಹಿಳೆಯಿಂದ (ನಾನ್‌ಕಾಗ್ನಿಜಬಲ್)

ಎನ್.ಸಿ. ದೂರನ್ನು ಸ್ವೀಕರಿಸಿ ಕರ್ತವ್ಯದಲ್ಲಿ ಘೋರ ನಿರ್ಲಕ್ಷತೆ ಮತ್ತು ಅತೀವ ಬೇಜವಾಬ್ದಾರಿತನ ಪ್ರದರ್ಶಿಸಿದ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಚಿತ್ರದುರ್ಗ, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 17-11-2009ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ಬಡ್ತಿಗೆ ಪರಿಣಾಮ ಬೀರದಂತೆ (ಘಣಖಲಣಣ ಜಜಜಿಜಥಿಣುಟರ) ಆರು ತಿಂಗಳ ಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 28-04-2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 118 ಪೊಸಿಅ 2010 ಬೆಂಗಳೂರು, ದಿನಾಂಕ : 19-04-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎ. ಕೃಷ್ಣಪ್ಪ, ಎ.ಎಸ್.ಐ., ನಾಯಕನಹಟ್ಟಿ ಪೊಲೀಸ್ ಠಾಣೆ, ಚಿತ್ರದುರ್ಗ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1144 ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಹೆಚ್.ಟಿ. ಜಯರಾಮಯ್ಯ, ಪೊಲೀಸ್ ಇನ್‌ಸ್ಪೆಕ್ಟರ್, ಪ್ರಧಾನ ಕಛೇರಿ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: 25/ಡಿಇ-1/ಆರ್6/2008 ದಿನಾಂಕ: 15-12-2009.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(8)138/2009-10 ದಿನಾಂಕ 03-05-2010.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 17-06-2010.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)138/2009-10 ದಿನಾಂಕ 30-08-2010.

**ಪ್ರಸ್ತಾವನೆ :**

ಶ್ರೀ ಹೆಚ್.ಟಿ. ಜಯರಾಮಯ್ಯ, ಪೊಲೀಸ್ ಇನ್‌ಸ್ಪೆಕ್ಟರ್, ಪ್ರಧಾನ ಕಛೇರಿ, ಬೆಂಗಳೂರು, ಇವರು ಬೆಂಗಳೂರಿನ ನಂದಿನಿ ಲೇಔಟ್ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತನ ಹಾಗೂ ಬೇಜವಾಬ್ದಾರಿತನ ಹಾಗೂ ಅಧಿಕಾರ ದುರುಪಯೋಗಪಡಿಸಿಕೊಂಡ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಶ್ರೀ ಹೆಚ್.ಟಿ. ಜಯರಾಮಯ್ಯ, ಪಿ.ಐ., ನಂದಿನಿ ಬಡಾವಣೆ ಪೊಲೀಸ್ ಠಾಣೆ, ಓ.ಓ.ಡಿ. ನಗರ ವಿಶೇಷ ಶಾಖೆ, ಬೆಂಗಳೂರು ನಗರ ಆದ ನೀವು ಈ ಹಿಂದೆ ನಂದಿನಿ ಬಡಾವಣೆ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಇನ್‌ಸ್ಪೆಕ್ಟರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಹಿಂದಿನ ಠಾಣಾಧಿಕಾರಿಗಳು ಕ್ರಿಮಿನಲ್ ಮೊಕದ್ದಮೆಯಲ್ಲಿ ವಶಪಡಿಸಿಕೊಂಡಿದ್ದ ಮಾಲುಗಳು ಕಾಣೆಯಾಗಲು ಕಾರಣರಾಗಿರುತ್ತೀರಿ ಹಾಗೂ ನಂದಿನಿ ಬಡಾವಣೆ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ: 3/05 ಕಲಂ 392 ಐಪಿಸಿ ಪ್ರಕರಣದಲ್ಲಿ ವಶಪಡಿಸಿಕೊಂಡಿದ್ದ ಆಟೋರಿಕ್ಷಾ ಸಂಖ್ಯೆ: ಕೆ.ಎ. 02 6067 ಇದು ವಿವಾದಿತ ಲಾರಿ ರಿಜಿಸ್ಟ್ರೇಷನ್ ನಂಬರ್ ಹೊಂದಿದ್ದು ನಿಜವಾದ ವಾಹನ ಮಾಲೀಕರಲ್ಲದವರಿಗೆ ವಾಹನವನ್ನು ಬಿಡುಗಡೆ ಮಾಡಿರುತ್ತೀರಿ. ದಿನಾಂಕ: 06-05-2008 ರಂದು ನಂದಿನಿ ಬಡಾವಣೆ ಪೊಲೀಸ್ ಠಾಣೆಯ ಕಟ್ಟಡ ಹಾಗೂ ಕಾಂಪೌಂಡನ್ನು ಠಾಣೆಯ ಪಕ್ಕದ ನಿವೇಶನದವರು ಅತಿಕ್ರಮ ಪ್ರವೇಶ ಮಾಡಿ ಜೆ.ಸಿ.ಬಿ. ಮೂಲಕ ಬೀಳಿಸಿ ಠಾಣೆಯ ಕಾಂಪೌಂಡ್‌ನಲ್ಲಿದ್ದ ತೆಂಗಿನ ಮರವನ್ನು ಹಾಗೂ ಹೂತೋಟವನ್ನು

ನಾಶಪಡಿಸಿದ್ದರೂ ಸಹ ಅದನ್ನು ತಡೆಯದೆ ಮೇಲಧಿಕಾರಿಗಳಿಗೆ ಈ ವಿಷಯವನ್ನು ತಿಳಿಸದೆ ಒಬ್ಬ ಜವಾಬ್ದಾರಿಯುತ ಠಾಣಾಧಿಕಾರಿಯಾದ ನೀವು ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ಬೇಜವಾಬ್ದಾರಿತನ ಹಾಗೂ ಅಧಿಕಾರ ದುರುಪಯೋಗ ಪಡಿಸಿಕೊಂಡಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಇವರ ಮೇಲಿನ ಎರಡು ಆರೋಪಗಳು ಸಾಬೀತಾಗಿರುತ್ತದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 15–12–2009ರ ಆದೇಶದಲ್ಲಿ ಅರ್ಜಿದಾರರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 03–05–2010ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ಆದೇಶವನ್ನು ಭಾಗಶಃ ಮಾರ್ಪಡಿಸಿ ಇವರನ್ನು ಸೇವೆಗೆ ಪುನರ್ ನೇಮಕ ಮಾಡಿ ಇವರ ವೇತನವನ್ನು ಇವರು ಹೊಂದಿದ್ದ ಹುದ್ದೆಯ ಕಾಲಿಕ ವೇತನ ಶ್ರೇಣಿಯಲ್ಲಿ ಕನಿಷ್ಠ ಹಂತಕ್ಕೆ ಮೂರು ವರ್ಷಗಳ ಕಾಲ ಸಂಚಿತ ಪರಿಣಾಮವಾಗಿ ಇಳಿಸಲಾಗಿದೆ. ಶಿಕ್ಷಾವಧಿಯಲ್ಲಿ ಯಾವುದೇ ವೇತನ ಬಡ್ತಿ/ಪದೋನ್ನತಿಗಳಿಗೆ ಅರ್ಹರಿರುವುದಿಲ್ಲ ಹಾಗೂ ಸೇವೆಯಿಂದ ಹೊರಗುಳಿದ ಅವಧಿಯನ್ನು ಊಹ – ಓಟಿ ಎಂದು ಪರಿಗಣಿಸಲಾಗಿದೆ. ಇವರು ಸೇವೆಗೆ ಪುನರ್ ನೇಮಕ ಹೊಂದಿದ ದಿನಾಂಕದಿಂದ ಶಿಕ್ಷೆಯು ಜಾರಿಗೆ ಬರುತ್ತದೆ. ದಂಡನಾವಧಿ ಪೂರ್ಣಗೊಂಡ ನಂತರ ದಂಡನಾಧಿಯ ಪೂರ್ವದಲ್ಲಿ ಪಡೆಯುತ್ತಿದ್ದ ಮೂಲ ವೇತನದಿಂದ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಅರ್ಹರಾಗಿರುತ್ತಾರೆಂದು ಆದೇಶಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಅಧಿಕಾರ ದುರುಪಯೋಗ ಪಡಿಸಿಕೊಂಡಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 113 ಪೊಸಿಅ 2010 ಬೆಂಗಳೂರು, ದಿನಾಂಕ : 19–04–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ಟಿ. ಜಯರಾಮಯ್ಯ, ಪೊಲೀಸ್ ಇನ್‌ಸ್ಪೆಕ್ಟರ್, ಪ್ರಧಾನ ಕಛೇರಿ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1145 ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಬಿ.ಎಂ. ಶ್ರೀನಿವಾಸ, ಪಿ.ಎಸ್.ಐ. ಯಳಂದೂರು ಪೊಲೀಸ್ ಠಾಣೆ, ಚಾಮರಾಜನಗರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮೈಸೂರು ಜಿಲ್ಲೆ, ಇವರ ಆದೇಶ ಸಂಖ್ಯೆ: ಶಿಕ್ಷೆ/83/2009 ಓ.ಬಿ. 31/2010 ದಿನಾಂಕ: 23–01–2010.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಅಪೀಲು(14)/2010–11 ಓ.ಬಿ. 19/2010–11 ದಿನಾಂಕ 29–06–2010.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 06–09–2010.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)56/2010–11 ದಿನಾಂಕ 26–11–2010.

**ಪ್ರಸ್ತಾವನೆ :**

ಶ್ರೀ ಬಿ.ಎಂ. ಶ್ರೀನಿವಾಸ, ಪಿ.ಎಸ್.ಐ., ಇವರು ಬದನವಾಳು ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಬೇಜವಾಬ್ದಾರಿತನ ಹಾಗೂ ನಿರ್ಲಕ್ಷತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ನೀವು ಡಿ.ಎಸ್.ಪಿ., ನಂಜನಗೂಡು ಉಪ ವಿಭಾಗ ರವರು ದಿನಾಂಕ 11–07–2009 ಮತ್ತು 12–07–2009 ರಂದು ಬದನವಾಳು ಠಾಣೆಯ ಸಮೀಕ್ಷಣೆಯನ್ನು ನಡೆಸಿ ದಿನಾಂಕ 16–07–2009 ರಂದು ಕಳುಹಿಸಿದ ಸಮೀಕ್ಷಣಾ ಟಿಪ್ಪಣಿಗೆ ಪಾಲನಾ ವರದಿ ಸಲ್ಲಿಸದೇ ಇರುವುದರ ಮೂಲಕ ಕರ್ತವ್ಯದಲ್ಲಿ ಬೇಜವಾಬ್ದಾರಿ ಹಾಗೂ ನಿರ್ಲಕ್ಷತೆ ಪ್ರದರ್ಶಿಸಿ ಕರ್ತವ್ಯ ಲೋಪವೆಸಗಿರುವ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮೈಸೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 23–01–2010ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವೇತನ ಬಡ್ತಿಯನ್ನು ತದನಂತರದ ವೇತನ ಬಡ್ತಿಗಳಿಗೆ ಪರಿಣಾಮ ಬೀರದಂತೆ ಮೂರು ತಿಂಗಳ ಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 29-06-2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 144 ಪೊಸಿಅ 2010 ಬೆಂಗಳೂರು, ದಿನಾಂಕ : 19-04-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಎಂ. ಶ್ರೀನಿವಾಸ, ಪಿ.ಎಸ್.ಐ. ಯಳಂದೂರು ಪೊಲೀಸ್ ಠಾಣೆ, ಚಾಮರಾಜನಗರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1146 ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎನ್. ಶ್ರೀನಿವಾಸ, ಸಿಪಿಸಿ, ನಾಗಮಂಗಲ ಗ್ರಾಮಾಂತರ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(2)ಡಿಇ/27/2008-09 (ಓ.ಬಿ. 352/2009-10) ದಿನಾಂಕ: 06-02-2010.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಅಪೀಲು/02/2010-11 (ಓ.ಬಿ. 16/2010-11) ದಿನಾಂಕ 28-06-2010.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 29-07-2010.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)45/2010-11 ದಿನಾಂಕ 12-10-2010.

**ಪ್ರಸ್ತಾವನೆ :**

ಶ್ರೀ ಎನ್. ಶ್ರೀನಿವಾಸ, ಸಿಪಿಸಿ, ನಾಗಮಂಗಲ ಪೊಲೀಸ್ ಠಾಣೆ, ಇವರು ಈ ಹಿಂದೆ ಕೆ.ಆರ್.ಪೇಟೆ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ತೋರಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಶ್ರೀ ಎನ್. ಶ್ರೀನಿವಾಸ, ಸಿಪಿಸಿ-688 ಹಾಲಿ ನಾಗಮಂಗಲ ಗ್ರಾಮಾಂತರ ಪೊಲೀಸ್ ಠಾಣೆ ಆದ ನೀವು ಕೆ.ಆರ್.ಪೇಟೆ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ 29-01-2009 ಮತ್ತು 30-01-2009 ರಂದು ಎರಡು ದಿವಸ ಆಕಸ್ಮಿಕ ರಜೆ ಪಡೆದುಕೊಂಡು ಹೋಗಿದ್ದು, ನೀವು ದಿನಾಂಕ 29-01-2009 ರಂದು ರಾತ್ರಿ ಸುಮಾರು 7-30 ಗಂಟೆ ಸಮಯದಲ್ಲಿ ಕೆ.ಆರ್.ಪೇಟೆ ಟೌನ್ ಮುಖಾಂತರ ರಸ್ತೆಯಲ್ಲಿ ಹೋಗುತ್ತಿದ್ದ ನಂ: ಕೆಎ 52-2592ರ ಮರಳು ಲಾರಿಯನ್ನು ತಡೆದು ನಿಲ್ಲಿಸಿ ಲಾರಿ ಚಾಲಕನಿಂದ ರೂ. 100-00 ಗಳನ್ನು ಕೊಡಬೇಕೆಂದು ಒತ್ತಾಯ ಮಾಡುತ್ತಿದ್ದಾಗ, ಲಾರಿ ಚಾಲಕ ತನ್ನ ಬಳಿ ಹಣವಿಲ್ಲವೆಂದು ಲಾರಿ ಮಾಲೀಕರೊಂದಿಗೆ ಮಾತನಾಡುವಂತೆ ತನ್ನ ಮೊಬೈಲ್ ಫೋನನ್ನು ನಿಮಗೆ ಕೊಟ್ಟಾಗ ನೀವು ಲಾರಿ ಚಾಲಕನ ಫೋನನ್ನು ಕೆಳಕ್ಕೆ ಬಿಸಾಕಿ ಹೊಡೆದು ಹಾಕಿದ ವಿಚಾರದಲ್ಲಿ ಲಾರಿ ಚಾಲಕನಿಗೂ ನಿಮಗೂ ಜಗಳ ಉಂಟಾಗಿ ಸಾರ್ವಜನಿಕರು ಈ ವಿಚಾರದಲ್ಲಿ ಗುಂಪು ಸೇರಿ ನಿಮ್ಮೊಂದಿಗೆ ವಾಗ್ವಾದಕ್ಕಿಳಿದು ರಸ್ತೆಯಲ್ಲಿ ಪ್ರತಿಭಟನೆ ನಡೆಸಿ ರಸ್ತೆ ಸಂಚಾರ ಅಸ್ತವ್ಯಸ್ಥವಾಗಿ ಕಾನೂನು ಸುವ್ಯವಸ್ಥೆಗೆ ಭಂಗ ಉಂಟಾಗಲು ನೀವು ಕಾರಣರಾಗಿದ್ದು ಹಾಗೂ ಪೊಲೀಸ್ ಇಲಾಖೆಗೆ ಅಗೌರವ ಬರುವಂತೆ ನಡೆದುಕೊಂಡು ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಬೇಜವಾಬ್ದಾರಿತನ ಅಸಡ್ಡೆಯನ್ನು ತೋರಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ 06-02-2010ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಪಿ.ಸಿ. ಹುದ್ದೆಯ ಕನಿಷ್ಠ ವೇತನಕ್ಕೆ 5 ವರ್ಷಗಳ ಕಾಲ ಸಂಚಿತ ಪರಿಣಾಮ ಬೀರುವಂತೆ ಇಳಿಸಲಾಗಿದೆ. ದಿನಾಂಕ 07-02-2009 ರಿಂದ 16-03-2009 ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೋಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 28–06–2010ರ ಆದೇಶದಲ್ಲಿ ಭಾಗಶಃ ಮಾರ್ಪಡಿಸಿ ಇವರ ವೇತನವನ್ನು ಪಿ.ಸಿ. ಹುದ್ದೆಯ ಕನಿಷ್ಠ ವೇತನಕ್ಕೆ 3 ವರ್ಷಗಳ ಕಾಲ ನಂತರದ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರುವಂತೆ ಮುಂದೂಡಲಾಗಿದೆ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 132 ಪೊಸಿಅ 2010 ಬೆಂಗಳೂರು, ದಿನಾಂಕ : 19–04–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎನ್. ಶ್ರೀನಿವಾಸ, ಸಿಪಿಸಿ, ನಾಗಮಂಗಲ ಗ್ರಾಮಾಂತರ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1147

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಹುಬ್ಬಳ್ಳಿ ಈದ್ಗಾ ಮೈದಾನದಲ್ಲಿ ಪ್ರತಿ ವರ್ಷ 26ನೇ ಜನವರಿಯಂದು ಗಣರಾಜ್ಯೋತ್ಸವ ಮತ್ತು 15ನೇ ಆಗಸ್ಟ್ ರಂದು ನಡೆಯುವ ಸ್ವಾತಂತ್ರ್ಯ ದಿನಾಚರಣೆ ಸಮಾರಂಭದಲ್ಲಿ ಧ್ವಜಾರೋಹಣೆ ಮಾಡುವ ಕುರಿತು.

**ಓದಲಾಗಿದೆ :** ಒಳಾಡಳಿತ ಇಲಾಖೆಯ ಕಡತ ಸಂಖ್ಯೆ: ಹೆಚ್‌ಡಿ 23 ಎಸ್‌ಎಸ್‌ಟಿ 2011.

**ಪ್ರಸ್ತಾವನೆ :**

ಹುಬ್ಬಳ್ಳಿ–ಧಾರವಾಡ ಮಹಾನಗರಪಾಲಿಕೆ ವ್ಯಾಪ್ತಿಯ ಸಿ.ಟಿ. ಸರ್ವೆ ನಂ. 174 ರಲ್ಲಿ ಇರುವ 1 ಎಕರೆ 5 ಗುಂಟೆ 76 ಚೌ. ಪು (ಹುಬ್ಬಳ್ಳಿ ಈದ್ಗಾ ಮೈದಾನ) ಜಾಗವು ಹುಬ್ಬಳ್ಳಿ–ಧಾರವಾಡ ಮಹಾನಗರಪಾಲಿಕೆಯ ಮಾಲೀಕತ್ವಕ್ಕೆ ಸೇರಿದ್ದು ಈ ಜಾಗದಲ್ಲಿ ನಡೆಯುವ ಜನವರಿ 26ರ ಗಣರಾಜ್ಯೋತ್ಸವ ಮತ್ತು 15ನೇ ಆಗಸ್ಟ್ ಸ್ವಾತಂತ್ರ್ಯ ದಿನಾಚರಣೆ ಸಮಾರಂಭದಲ್ಲಿ ಧ್ವಜಾರೋಹಣ ಯಾರು ಮಾಡಬೇಕೆಂಬ ಬಗ್ಗೆ ಸರ್ಕಾರವು ಕಾಲಕಾಲಕ್ಕೆ ಆದೇಶ ಹೊರಡಿಸುತ್ತಿದೆ.

2) ಈ ಸಂಬಂಧ ಮೇಲೆ (1)ರಲ್ಲಿ ಓದಲಾದ ಕಡತದಲ್ಲಿನ ಪ್ರಸ್ತಾವನೆಯಲ್ಲಿ ಸದರಿ ಜಾಗದಲ್ಲಿ 26ನೇ ಜನವರಿಯ ಗಣರಾಜ್ಯೋತ್ಸವ ಮತ್ತು 15ನೇ ಆಗಸ್ಟ್‌ರ ಸ್ವಾತಂತ್ರ್ಯ ದಿನಾಚರಣೆ ಸಮಾರಂಭದಲ್ಲಿ ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮಹಾನಗರಪಾಲಿಕೆ ಇವರು ಧ್ವಜಾರೋಹಣ ಮಾಡುವ ಬಗ್ಗೆ ಸ್ಥಾಯಿ ಆದೇಶ ಹೊರಡಿಸುವುದು ಉಚಿತವೆಂದು ಅಭಿಪ್ರಾಯ ಪಡಲಾಗಿದೆ.

3) ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 12 ಎಹೆಚ್‌ಡಿ 2011 ಬೆಂಗಳೂರು, ದಿನಾಂಕ : 08–03–2011**

1) ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹುಬ್ಬಳ್ಳಿ–ಧಾರವಾಡ ಮಹಾನಗರಪಾಲಿಕೆ ವ್ಯಾಪ್ತಿಯ ಸಿ.ಟಿ. ಸರ್ವೆ ನಂ. 174 ರಲ್ಲಿ ಇರುವ 1 ಎಕರೆ 5 ಗುಂಟೆ 76 ಚೌ. ಪೂ. ಖಾಲಿ ಜಾಗದಲ್ಲಿ (ಹುಬ್ಬಳ್ಳಿ ಈದ್ಗಾ ಮೈದಾನ) ಪ್ರತಿ ವರ್ಷ 26ನೇ ಜನವರಿಯ ಗಣರಾಜ್ಯೋತ್ಸವ ಮತ್ತು 15ನೇ ಆಗಸ್ಟ್ ರ ಸ್ವಾತಂತ್ರ್ಯ ದಿನಾಚರಣೆ ಸಮಾರಂಭದಲ್ಲಿ ಇನ್ನು ಮುಂದೆ ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮಹಾನಗರಪಾಲಿಕೆ ಇವರು ಧ್ವಜಾರೋಹಣ ಮಾಡುವಂತೆ ಆದೇಶಿಸಿದೆ.

2) ಈ ಆದೇಶವು ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.

3) ಈ ಆದೇಶವನ್ನು ಒಳಾಡಳಿತ ಇಲಾಖೆಯ ದಿನಾಂಕ 23–01–2011ರ ಅನಧಿಕೃತ ಟಿಪ್ಪಣಿ ಸಂಖ್ಯೆ : ಒಇ 23 ಎಸ್‌ಎಸ್‌ಟಿ 2011 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಆರ್. ಮಹೇಶ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ (ಮಹಾನಗರ ಪಾಲಿಕೆ–2)

ನಗರಾಭಿವೃದ್ಧಿ ಇಲಾಖೆ

ಪಿ.ಆರ್. 1148

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿನ ಕೃಷ್ಣಾ ಭಾಗ್ಯ ಜಲ ನಿಗಮ ವಿಶೇಷ ಕೋಶವನ್ನು ಹಾಗೂ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 14 ಸಸಿವಿ 1994, ದಿನಾಂಕ 07–07–1994.
2. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 34 ಸಸಿವಿ 1999, ದಿನಾಂಕ 22–10–1999.
3. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 09 ಸಸಿವಿ 2007, ದಿನಾಂಕ 2–3–2007.
4. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 233 ಸ.ಆ.ಸೇ 2009, ದಿನಾಂಕ 15–5–2009.
5. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 197 ಸ.ಆ.ಸೇ 2009, ದಿನಾಂಕ 22–4–2010.
6. ಜಲಸಂಪನ್ಮೂಲ ಇಲಾಖೆಯ ಕಡತ ಸಂಖ್ಯೆ ಜಸಂಇ 55 ಕೆಬಿಎನ್ 2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ಮತ್ತು (2) ರ ಸರ್ಕಾರದ ಆದೇಶಗಳಲ್ಲಿ ಜಲಸಂಪನ್ಮೂಲ ಇಲಾಖೆಯಲ್ಲಿ ಕೃಷ್ಣಾ ಭಾಗ್ಯ ಜಲ ನಿಗಮದ ಪ್ರಾರಂಭಿಕ ಕಾರ್ಯಗಳನ್ನು ನಿರ್ವಹಿಸಲು ಈ ಕೆಳಕಂಡ ಹುದ್ದೆಗಳನ್ನು ಒಳಗೊಂಡಂತೆ ಕೃಷ್ಣಾ ಭಾಗ್ಯ ಜಲ ನಿಗಮದ ವಿಶೇಷ ಕೋಶವನ್ನು ಸೃಜಿಸಲಾಗಿದೆ. ಈ ತಾತ್ಕಾಲಿಕ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಆದೇಶದಲ್ಲಿ ವಿಶೇಷ ಕೋಶದೊಂದಿಗೆ ಸದರಿ ಹುದ್ದೆಗಳನ್ನು ದಿನಾಂಕ 1.4.2010 ರಿಂದ 31–3–2011 ರ ವರೆಗೆ ಮುಂದುವರೆಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ಕಡತದಲ್ಲಿ ಜಲಸಂಪನ್ಮೂಲ ಇಲಾಖೆಯ ವಿಶೇಷ ಕೋಶ ಹಾಗೂ ಪೂರಕ ಹುದ್ದೆಗಳ ಅಗತ್ಯವಿರುವುದರಿಂದ ವಿಶೇಷ ಕೋಶ ಹಾಗೂ ಹುದ್ದೆಗಳನ್ನು ಮುಂದುವರೆಸುವಂತೆ ಪ್ರಸ್ತಾಪಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ | 1 |
| 2 | ವಿಶೇಷ ಕರ್ತವ್ಯಾಧಿಕಾರಿ (ಅಧೀನ ಕಾರ್ಯದರ್ಶಿ ಕೇಡರ್) | 1 |
| 3 | ಶಾಖಾಧಿಕಾರಿ | 1 |
| 4 | ಹಿರಿಯ ಸಹಾಯಕ | 2 |
| 5 | ಸಹಾಯಕ | 1 |
| 6 | ಶೀಘ್ರಲಿಪಿಗಾರರು | 1 |
| 7 | ಬೆರಳಚ್ಚುಗಾರರು | 1 |
| 8 | ದಲಾಯತ್ | 1 |

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ ಆಪ್ತ ಶಾಖೆ ಸಿಬ್ಬಂದಿ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಶೀಘ್ರಲಿಪಿಗಾರರು | 1 |
| 2 | ಕಿರಿಯ ಸಹಾಯಕರು | 1 |
| 3 | ಗ್ರೂಪ್–ಡಿ | 1 |

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 204 ಸ.ಆ.ಸೇ. 2011, ಬೆಂಗಳೂರು, ದಿನಾಂಕ 15ನೇ ಏಪ್ರಿಲ್ 2011**

ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿನ ಕೃಷ್ಣಾ ಭಾಗ್ಯ ಜಲ ನಿಗಮದ ವಿಶೇಷ ಕೋಶವನ್ನು ಹಾಗೂ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ 1–4–2011 ರಿಂದ 31–3–2012 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಿ ಆದೇಶಿಸಲಾಗಿದೆ.

| **ಕ್ರಮ ಸಂಖ್ಯೆ** | **ಹುದ್ದೆಯ ಪದನಾಮ** | **ಹುದ್ದೆಗಳ ಸಂಖ್ಯೆ** |
|---|---|---|
| 1 | ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ | 1 |
| 2 | ವಿಶೇಷ ಕರ್ತವ್ಯಾಧಿಕಾರಿ (ಅಧೀನ ಕಾರ್ಯದರ್ಶಿ ಕೇಡರ್) | 1 |
| 3 | ಶಾಖಾಧಿಕಾರಿ | 1 |
| 4 | ಹಿರಿಯ ಸಹಾಯಕ | 2 |
| 5 | ಸಹಾಯಕ | 1 |
| 6 | ಶೀಘ್ರಲಿಪಿಗಾರರು | 1 |
| 7 | ಬೆರಳಚ್ಚುಗಾರರು | 1 |
| 8 | ದಲಾಯತ್ | 1 |

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ ಆಪ್ತ ಶಾಖೆ ಸಿಬ್ಬಂದಿ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಶೀಘ್ರಲಿಪಿಗಾರರು | 1 |
| 2 | ಕಿರಿಯ ಸಹಾಯಕರು | 1 |
| 3 | ಗ್ರೂಪ್–ಡಿ | 1 |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–07–1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ.
(ಸೇವೆಗಳು–3)

ಪಿ.ಆರ್. 1149

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ಶ್ರೀ ವಿಜಯಕುಮಾರ್ ಉಪ್ಪಿನ್, ಹಿಂದಿನ ಉಪ ನಿರ್ದೇಶಕರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೀದರ್ ಜಿಲ್ಲೆ, ಬೀದರ್ ಇವರ ಅಧಿಕಾರ ಅವಧಿಯಲ್ಲಿ ಪಡಿತರ ವಸ್ತುಗಳ ವಿತರಣೆಯಲ್ಲಿ ಅವ್ಯವಹಾರ ಹಾಗೂ ಪರವಾನಿಗೆ ನವೀಕರಣದಲ್ಲಿ ಆಗಿರುವ ಕರ್ತವ್ಯಲೋಪದ ಬಗ್ಗೆ ತನಿಖೆ ಮತ್ತು ಶಿಸ್ತು ಕ್ರಮದ ಕುರಿತು.

**ಉಲ್ಲೇಖ :** ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರ ಪತ್ರ ಸಂಖ್ಯೆ : ಎಫ್‌ಎಸ್‌ಎ/ಎಫ್‌ಎಆರ್/ಬೀ.ವಿ.ಲೆ/2010–11, 2005, ದಿನಾಂಕ 17–02–2011.

**ಪ್ರಸ್ತಾವನೆ :**

ದಿನಾಂಕ 20–02–2007 ರಿಂದ 29–12–2009ರ ಅವಧಿಯಲ್ಲಿ ಬೀದರ್ ಜಿಲ್ಲೆಯಲ್ಲಿ ಆಹಾರಧಾನ್ಯ, ಸೀಮೆಎಣ್ಣೆ ವಿತರಣೆಯಲ್ಲಿ ಆಗಿರುವ ಅವ್ಯವಹಾರದ ಬಗ್ಗೆ ವಿಶೇಷ ಲೆಕ್ಕತಪಾಸಣೆ ನಡೆಸುವಂತೆ ಬೀದರ್ ಜಿಲ್ಲೆಯ ಜಿಲ್ಲಾಧಿಕಾರಿಗಳು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಆಯುಕ್ತರನ್ನು ಕೋರಿದ್ದ ಮೇರೆಗೆ, ಶ್ರೀ ಕೆ.ಎಸ್.ಹನುಮಂತಪ್ಪ, ಲೆಕ್ಕಾಧಿಕಾರಿಗಳು (ಉಗ್ರಾಣ) ಇವರ ನೇತೃತ್ವದ ಲೆಕ್ಕತಪಾಸಣಾ ತಂಡವನ್ನು ನಿಯೋಜಿಸಿ ವಿಶೇಷ ಲೆಕ್ಕತಪಾಸಣೆಯನ್ನು ನಡೆಸಲಾಗಿರುತ್ತದೆ. ಸದರಿ ಲೆಕ್ಕತಪಾಸಣಾ ತಂಡವು ಲೆಕ್ಕತಪಾಸಣೆಯನ್ನು ನಡೆಸಿ ದಿನಾಂಕ 10–2–2011 ರ ತನ್ನ ವರದಿಯನ್ನು ಸಲ್ಲಿಸಿರುತ್ತದೆ. ಸದರಿ ವಿಶೇಷ ಲೆಕ್ಕತಪಾಸಣಾ ವರದಿಯಲ್ಲಿ ಸದರಿ ಅವಧಿಯಲ್ಲಿ, ಬೀದರ್‌ನಲ್ಲಿ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಉಪ ನಿರ್ದೇಶಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಶ್ರೀ ವಿಜಯಕುಮಾರ್ ಉಪ್ಪಿನ್ ಇವರು ಸುಮಾರು ರೂ. 3,54,34,144 ಮೌಲ್ಯದ ಪಡಿತರ ವಸ್ತುಗಳ ದುರುಪಯೋಗ ಹಾಗೂ ಕರ್ತವ್ಯ ನಿರ್ವಹಣೆ ಜವಾಬ್ದಾರರು ಎಂದು ಲೆಕ್ಕತಪಾಸಣಾ ತಂಡವು ನಿರ್ಣಯಕ್ಕೆ ಬಂದಿರುತ್ತದೆ. ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯಲ್ಲಿ ವ್ಯವಸ್ಥಾಪಕರಾಗಿದ್ದ ಶ್ರೀ ವಿಜಯಕುಮಾರ್ ಉಪ್ಪಿನ್ ರವರು ಸರ್ಕಾರಿ ಅಧಿಸೂಚನೆ ಸಂ : ಆನಾಸ 29 ಆಇಸೇ 2007, ದಿನಾಂಕ 17–02–2007ರ ಪ್ರಕಾರ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯಲ್ಲಿ ಬೀದರ್ ಜಿಲ್ಲೆ, ಬೀದರ್ ಇಲ್ಲಿ ನಿಯೋಜನೆಯ ಮೇಲೆ ಉಪ ನಿರ್ದೇಶಕರಾಗಿ ನೇಮಕಗೊಂಡಿದ್ದರು.

ಸದರಿ ವಿಶೇಷ ಲೆಕ್ಕತಪಾಸಣಾ ವರದಿಯಲ್ಲಿ ಕಂಡು ಬಂದು ಅವ್ಯವಹಾರದ ವಿವರ ಈ ಕೆಳಗಿನಂತೆ ಇರುತ್ತದೆ :

**1. ಬೀದರ್ ಜಿಲ್ಲಾ ವ್ಯಾಪ್ತಿಯಲ್ಲಿ ಸೀಮೆಎಣ್ಣೆ ಸಗಟು ನಾಮಿನಿದಾರರ ಪರವಾನಗಿಗಳನ್ನು ನವೀಕರಿಸದಿರುವುದು :**

ಬೀದರ್ ಜಿಲ್ಲಾ ವ್ಯಾಪ್ತಿಯ ಒಟ್ಟು 5 ತಾಲ್ಲೂಕುಗಳ ಪಟ್ಟಣ ಕೇಂದ್ರ, ಗ್ರಾಮಾಂತರ ಪ್ರದೇಶಗಳಲ್ಲಿ ಮತ್ತು ಬೀದರ್ ಜಿಲ್ಲಾ ಕೇಂದ್ರದ ಅನೌಪಚಾರಿಕ ಪಡಿತರ ಪ್ರದೇಶಗಳ (Informal Rationing Area) ವ್ಯಾಪ್ತಿಯಲ್ಲಿ ಈ ಕೆಳಕಂಡ ಒಟ್ಟು 8 ಸಗಟು ಸೀಮೆಎಣ್ಣೆ ನಾಮಿನಿದಾರರು ಕಾರ್ಯನಿರ್ವಹಿಸುತ್ತಿರುತ್ತಾರೆ.

| ಕ್ರಮ ಸಂಖ್ಯೆ | ಸಗಟು ನಾಮಿನಿದಾರರ ಹೆಸರು | ಪರವಾನಗಿ ಸಂಖ್ಯೆ | ಕಾರ್ಯಕ್ಷೇತ್ರ |
|---|---|---|---|
| 1 | ಮೆ॥ ಎಂ.ಎಂ. ಜಬ್ಬಾರ್ ಅಂಡ್ ಸನ್ಸ್, ಬೀದರ್ | 01 | ಬೀದರ್ ಐ.ಆರ್.ಎ. ಮತ್ತು ಗ್ರಾಮಾಂತರ |
| 2 | ಮೆ॥ ಬೀದರ್ ಸೇಲ್ಸ್ ಅಂಡ್ ಸರ್ವೀಸ್, ಬೀದರ್ | 01 | ಬೀದರ್ ಐ.ಆರ್.ಎ. ಮತ್ತು ಗ್ರಾಮಾಂತರ |
| 3 | ಮೆ॥ ಮಹಾರುದ್ರಪ್ಪ, ಶಿರ್ಸಿ | 02 | (i) ಬಾಲ್ಕಿ ಪಟ್ಟಣ, ಗ್ರಾಮಾಂತರ<br>(ii) ಔರಾದ್ ಪಟ್ಟಣ, ಗ್ರಾಮಾಂತರ |
| 4 | ಮೆ॥ ಎ.ವಿ. ರಗಟೇ | 01 | ಬಸವ ಕಲ್ಯಾಣ ಪಟ್ಟಣ, ಗ್ರಾಮಾಂತರ |
| 5 | ಮೆ॥ ಹೈವೇ ಸರ್ವೀಸ್ ಸ್ಟೇಷನ್ | 01 | ಹುಮ್ನಾಬಾದ್ ಪಟ್ಟಣ, ಗ್ರಾಮಾಂತರ |
| 6 | ಮೆ॥ ಆರ್.ಜಿ. ಸಿಂದೋಲ್ | 01 | ಬೀದರ್ ಐ.ಆರ್.ಎ. ಮತ್ತು ಗ್ರಾಮಾಂತರ |
| 7 | ಮೆ॥ ಬಿ.ಎಂ. ಪವಾರ್ | 01 | ಬೀದರ್ ಐ.ಆರ್.ಎ. ಮತ್ತು ಗ್ರಾಮಾಂತರ |

| | | | |
|---|---|---|---|
| 8 | ಮೆ॥ ಎ.ಆರ್. ಚಿದ್ರಿ | 02 | (i) ಬೀದರ್ ಐ.ಆರ್.ಎ. ಮತ್ತು ಗ್ರಾಮಾಂತರ<br>(ii) ಹುಮ್ನಾಬಾದ್ ಪಟ್ಟಣ, ಗ್ರಾಮಾಂತರ |
| ಒಟ್ಟು | | 10 | |

ಮೇಲ್ಕಂಡ ಸಗಟು ಸೀಮೆಎಣ್ಣೆ ನಾಮಿನಿದಾರರು 2007, 2008, 2009 ಮತ್ತು 2010ನೇ ಸಾಲಿನಲ್ಲಿ ಪರವಾನಗಿ ನವೀಕರಿಸಲು ನಿಗದಿತ ಅವಧಿಗಳಲ್ಲಿ ಶುಲ್ಕ ಪಾವತಿಸಿ ಅರ್ಜಿಗಳನ್ನು ಶ್ರೀ ವಿಜಯಕುಮಾರ್ ಉಪ್ಪಿನ್, ಇವರಿಗೆ ಸಲ್ಲಿಸಿದ್ದರೂ ಶ್ರೀ ವಿಜಯಕುಮಾರ್ ಉಪ್ಪಿನ್ ರವರು ಅಂತಹ ಪರವಾನಗಿಗಳನ್ನು ನವೀಕರಿಸದೇ ಮಾಸಿಕ ಸಗಟು ಹಂಚಿಕೆ ಮತ್ತು ವಿತರಣೆ ಕಾರ್ಯವನ್ನು ಅವರ ಅವಧಿಯಲ್ಲಿ ನಿರ್ವಹಿಸಿರುತ್ತಾರೆ. ಇದು ಕರ್ನಾಟಕ ಅಗತ್ಯ ವಸ್ತುಗಳ ಕಾಯ್ದೆ (ಸಾರ್ವಜನಿಕ ವಿತರಣಾ ಪದ್ಧತಿ) ನಿಯಂತ್ರಣ ಆದೇಶ, 1992ರ ನಿಯಮ 7ರ ಷರತ್ತುಗಳ ಸ್ಪಷ್ಟ ಉಲ್ಲಂಘನೆಯಾಗಿದ್ದು, ಶ್ರೀ ವಿಜಯಕುಮಾರ್ ಉಪ್ಪಿನ್ ಅವರು ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ಕರ್ತವ್ಯ ನಿರ್ವಹಣೆಯಲ್ಲಿ ಲೋಪವೆಸಗಿರುತ್ತಾರೆಂದು ಲೆಕ್ಕತಪಾಸಣಾ ತಂಡವು ವರದಿ ಮಾಡಿದೆ.

ಈ ಬಗ್ಗೆ ಈಗಿನ ಉಪ ನಿರ್ದೇಶಕರು, ಜಿಲ್ಲಾಧಿಕಾರಿಗಳ ಗಮನಕ್ಕೆ ತಂದು ಅನುಮೋದನೆ ಪಡೆದು ಅಂತಹ ಪರವಾನಗಿಗಳನ್ನು ನವೀಕರಣಗೊಳಿಸಿರುತ್ತಾರೆ.

**2. ಬೀದರ್ ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ನ್ಯಾಯಬೆಲೆ ಅಂಗಡಿ ಮತ್ತು ಚಿಲ್ಲರೆ ಸೀಮೆಎಣ್ಣೆ ಅಂಗಡಿಗಳ ಪರವಾನಗಿಗಳನ್ನು ನವೀಕರಿಸದಿರುವ ಬಗ್ಗೆ :**

ಸಾರ್ವಜನಿಕ ವಿತರಣಾ ವ್ಯವಸ್ಥೆಯಡಿ ಬೀದರ್ ಜಿಲ್ಲಾ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ನ್ಯಾಯಬೆಲೆ ಅಂಗಡಿ ಮತ್ತು ಚಿಲ್ಲರೆ ಸೀಮೆಎಣ್ಣೆ ಅಂಗಡಿಗಳ ಪರವಾನಗಿಗಳನ್ನು ಪ್ರತಿ ವರ್ಷ ಪರಿಶೀಲಿಸಿ, ನವೀಕರಿಸುವುದು/ರದ್ದುಪಡಿಸುವುದು ಉಪ ನಿರ್ದೇಶಕರ ಜವಾಬ್ದಾರಿಯಾಗಿರುತ್ತದೆ. ಕೆಲವು ಪರವಾನಗಿಗಳು 2001, 2003, 2004, 2006 ಮತ್ತು 2009 ರಲ್ಲೇ ಮುಕ್ತಾಯಗೊಂಡಿದ್ದರೂ ಅವುಗಳನ್ನು ನವೀಕರಿಸಲಾಗಿಲ್ಲ ಅಥವಾ ರದ್ದುಪಡಿಸಿರುವುದೂ ಇಲ್ಲ. ಕೆಲವು ಪರವಾನಗಿಗಳ ನವೀಕರಣ ವಿವರಗಳ ಪರಿಶೀಲನೆಗೂ ಲಭ್ಯವಿರುವುದಿಲ್ಲ. ಉಪ ನಿರ್ದೇಶಕರು ತಾಲ್ಲೂಕು ಕ್ಷೇತ್ರದ ವ್ಯಾಪ್ತಿಗೆ ಭೇಟಿ ನೀಡಿ ಪರಿಶೀಲಿಸದಿರುವ ಹಿನ್ನೆಲೆಯಲ್ಲಿ ನವೀಕರಿಸದ ಮತ್ತು ರದ್ದುಪಡಿಸಲು ಅರ್ಹವಾದ ಪರವಾನಗಿಗಳಿಗೆ ಇಂದಿಗೂ ಸಹ ಆಹಾರಧಾನ್ಯ ಸೀಮೆಎಣ್ಣೆ ನಿರಾತಂಕವಾಗಿ ವಿತರಣೆಯಾಗುತ್ತಿದೆ. ಶ್ರೀ ವಿಜಯಕುಮಾರ್ ಉಪ್ಪಿನ್, ಅವರು ಈ ರೀತಿಯಾಗಿ ಕರ್ತವ್ಯ ನಿರ್ವಹಣೆಯಲ್ಲಿ ಲೋಪವೆಸಗಿರುವುದು ಕಂಡುಬರುತ್ತದೆ.

**3. ಪ್ರವಾಹ ಪೀಡಿತರ ಪರಿಹಾರಕ್ಕಾಗಿ ಹಂಚಿಕೆ ಮಾಡಿದ ಅಕ್ಕಿ, ಗೋಧಿಯನ್ನು ಮುಂಚಿತವಾಗಿ ಎತ್ತುವಳಿ ಮಾಡಿ ವಿತರಿಸಿ ಅಕ್ರಮವೆಸಗಿರುವ ಬಗ್ಗೆ :**

2009ನೇ ಸಾಲಿನಲ್ಲಿ ರಾಜ್ಯದ ಉತ್ತರ ಕರ್ನಾಟಕ ಭಾಗದಲ್ಲಿ ಅತಿಯಾದ ಮಳೆಯಿಂದ ಉಂಟಾದ ಪ್ರವಾಹದಲ್ಲಿ ನೊಂದವರಿಗಾಗಿ ವಿತರಿಸಲು ಕೇಂದ್ರ ಸರ್ಕಾರವು ದಿನಾಂಕ 23-09-2009 ರಲ್ಲಿ ರಾಜ್ಯಕ್ಕೆ 7251 ಎಂ.ಟಿ. ಅಕ್ಕಿ ಮತ್ತು 14501 ಎಂ.ಟಿ. ಗೋಧಿಯನ್ನು ಬಿಡುಗಡೆ ಮಾಡಿರುತ್ತದೆ. ಬೀದರ್ ಜಿಲ್ಲೆಯಲ್ಲಿ ಪ್ರವಾಹ ಪರಿಸ್ಥಿತಿ ಇರದಿದ್ದರೂ, ಪೂರ್ವ ಸಿದ್ಧತೆಗಾಗಿ ಆಯುಕ್ತರು, ಮಾಹೆಯಾನ ಈ ಕೆಳಗಿನಂತೆ ಬಿಡುಗಡೆ ಮಾಡಿರುತ್ತಾರೆ.

i. ಅಕ್ಟೋಬರ್ ಮಾಹೆಯಲ್ಲಿ 200 ಕ್ವಿಂಟಾಲ್ ಅಕ್ಕಿ ಮತ್ತು 590 ಕ್ವಿಂಟಾಲ್ ಗೋಧಿ
ii. ನವೆಂಬರ್ ಮಾಹೆಯಲ್ಲಿ 3080 ಕ್ವಿಂಟಾಲ್ ಅಕ್ಕಿ
iii. ನವೆಂಬರ್ ಮಾಹೆಯಲ್ಲಿ 141 ಕ್ವಿಂಟಾಲ್ ಗೋಧಿ
iv. ಡಿಸೆಂಬರ್ ಮಾಹೆಯಲ್ಲಿ 170 ಕ್ವಿಂಟಾಲ್ ಗೋಧಿ

ಬೀದರ್ ಜಿಲ್ಲೆಯಲ್ಲಿ ಪ್ರವಾಹ ಪೀಡಿತರಿಗೆ ಪರಿಹಾರ ಕೈಗೊಳ್ಳುವ ಪರಿಸ್ಥಿತಿ ಇರುವ ಬಗ್ಗೆ ಜಿಲ್ಲಾಧಿಕಾರಿಯವರಿಂದ ಮನವಿ/ಬೇಡಿಕೆ ಪತ್ರ ಸಲ್ಲಿಕೆಯಾಗಿರುವ ಬಗ್ಗೆ ಯಾವುದೇ ಮಾಹಿತಿ ಪರಿಶೀಲನೆಗೆ ಲಭ್ಯವಿರುವುದಿಲ್ಲ. ಹಾಗೆ ಆ ಯೋಜನೆಯಡಿ ಪೂರ್ವಸಿದ್ಧತೆಗಾಗಿ ಬಿಡುಗಡೆ ಮಾಡಿ ಅಕ್ಕಿ ಮತ್ತು ಗೋಧಿಯನ್ನು ಎತ್ತುವಳಿ ಮಾಡುವುದು ಅವಶ್ಯಕತೆ ಇಲ್ಲದಿದ್ದರೂ ಆ ಎಲ್ಲಾ ಆಹಾರಧಾನ್ಯವನ್ನು ಎತ್ತುವಳಿ ಮಾಡಿ ನೆಮ್ಮದಿ ಕೇಂದ್ರದಿಂದ ವಿತರಿಸಲಾದ ಪಡಿತರ ಚೀಟಿಗಳಿಗೆ ವಿತರಿಸಿರುತ್ತಾರೆಂದು ತಿಳಿದು ಬಂದಿದೆ.

ಹಾಗೆಯೇ, ಪ್ರವಾಹ ಪೀಡಿತ ಜಿಲ್ಲೆಗಳಲ್ಲಿ ಸಂತ್ರಸ್ಥರ ಅನುಕೂಲಕ್ಕೆ ಉಪಯೋಗಿಸಲಾದ ಆಹಾರಧಾನ್ಯಗಳ ವೆಚ್ಚವನ್ನು ಸಂಬಂಧಿಸಿದ ಜಿಲ್ಲಾಧಿಕಾರಿಗಳ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಭರಿಸತಕ್ಕದೆಂದು ಆಯುಕ್ತರು ಅಧಿಕೃತ ಜ್ಞಾಪನ ಸಂಖ್ಯೆ : ಸಿಎಫ್‌ಎಸ್/ಪಿಡಿ-III/57/2009-10, ದಿನಾಂಕ 15-10-2009 ರಲ್ಲಿ ಹೇಳಲಾಗಿದ್ದರೂ ಸಹಾಯಧನದ ಯೋಜನೆಯಡಿ ಸಹಾಯಧನವನ್ನು ಡಿ.ಸಿ. ಬಿಲ್ಲುಗಳ ಮೂಲಕ ಪಾವತಿಸಿರುತ್ತಾರೆ. ಪಾವತಿ ವಿವರ ಈ ಕೆಳಕಂಡಂತಿದೆ.

1. ಅಕ್ಕಿ : 3280 ಕ್ವಿಂಟಾಲ್ (ಪ್ರತಿ ಕ್ವಿಂಟಾಲ್‌ಗೆ ರೂ. 1211.60) = ರೂ. 39,74,343.00
2. ಗೋಧಿ : 590 ಕ್ವಿಂಟಾಲ್ (ಪ್ರತಿ ಕ್ವಿಂಟಾಲ್‌ಗೆ ರೂ. 823.00) = ರೂ. 4,85,570.00
3. ಗೋಧಿ : 1580 ಕ್ವಿಂಟಾಲ್ (ಪ್ರತಿ ಕ್ವಿಂಟಾಲ್‌ಗೆ ರೂ. 823.00) = ರೂ. 13,00,340.00

**ಒಟ್ಟು ರೂ. 57,60,253.00**

ಪ್ರವಾಹ ಪರಿಸ್ಥಿತಿ ಇರುವ ಬಗ್ಗೆ ಪೂರ್ಣವರದಿ ಪಡೆಯದೆ ಪೂರ್ವಸಿದ್ಧತೆಗಾಗಿ ಆಹಾರಧಾನ್ಯ ಹಂಚಿದ ಆದೇಶ ತಲುಪಿದ ಕೂಡಲೇ ಆರೋಪಿತರು ಬೇರೆ ಉದ್ದೇಶಕ್ಕಾಗಿ ಆಹಾರಧಾನ್ಯ ಎತ್ತುವಳಿ ಮಾಡಿರುತ್ತಾರೆ. ಹಾಗೆಯೇ ಜಿಲ್ಲಾಧಿಕಾರಿಗಳ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಭರಿಸಬೇಕಾದ ವೆಚ್ಚವನ್ನು ಸಹಾಯಧನ ಯೋಜನೆಯಡಿಯ ಲೆಕ್ಕದಲ್ಲಿ ಭರಿಸಿರುತ್ತಾರೆ. ಹೀಗೆ ಆಹಾರಧಾನ್ಯವನ್ನು ಬೇರೆ ಉದ್ದೇಶಕ್ಕಾಗಿ ಬಳಸಿದ ಮತ್ತು ಬೇರೆ ಲೆಕ್ಕಶೀರ್ಷಿಕೆಯಲ್ಲಿ ಆಹಾರಧಾನ್ಯದ ವೆಚ್ಚ ಭರಿಸಿದ ಮಾಹಿತಿಯನ್ನು ಜಿಲ್ಲಾಧಿಕಾರಿಗಳ ಗಮನಕ್ಕೆ ತಂದಿರುವ ಸಾಧ್ಯತೆ ತುಂಬಾ ಕಡಿಮೆ ಇರುವುದಾಗಿ ಹಾಗೂ ಇಂತಹ ಪ್ರಕ್ರಿಯೆಯಿಂದ ಶ್ರೀ ವಿಜಯಕುಮಾರ್ ಉಪ್ಪಿನ್, ಅವರು ರೂ. 57,60,253.00ರ ಎರಡು ಪಟ್ಟು ಅಂದರೆ ರೂ. 1,15,20,506.00/- (ಒಂದು ಕೋಟಿ ಹದಿನೈದು ಲಕ್ಷದ ಇಪ್ಪತ್ತು ಸಾವಿರದ ಐನೂರ ಆರು ರೂ.ಗಳು ಮಾತ್ರ) ಮೊತ್ತವನ್ನು ಸರ್ಕಾರಕ್ಕೆ ನಷ್ಟ ಉಂಟು ಮಾಡಿರುವುದಾಗಿ ಲೆಕ್ಕ ತಪಾಸಣಾ ತಂಡವು ತಿಳಿಸಿರುತ್ತದೆ.

**4. ಸಾರ್ವಜನಿಕ ವಿತರಣಾ ವ್ಯವಸ್ಥೆಯ ಸೀಮೆಎಣ್ಣೆ ವಿತರಣೆಯಲ್ಲಿ ಅಕ್ರಮ/ನ್ಯೂನತೆಗಳ ಬಗ್ಗೆ :**

ಸಾರ್ವಜನಿಕ ವಿತರಣಾ ವ್ಯವಸ್ಥೆಯಡಿ ಕೇಂದ್ರ ಸರ್ಕಾರವು ರಾಜ್ಯಕ್ಕೆ ಹಂಚಿಕೆ ಮಾಡುವ ಸಬ್ಸಿಡಿಯುಕ್ತ ಸೀಮೆಎಣ್ಣೆಯನ್ನು ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರು ಜಿಲ್ಲಾವಾರು ಹಂಚಿಕೆ ಮಾಡುತ್ತಾರೆ. ಆಯುಕ್ತರ ಸದರಿ ಹಂಚಿಕೆಯ ಮಿತಿಯಲ್ಲಿ ಜಿಲ್ಲೆಯ ಅನೌಪಚಾರಿಕ ಪಡಿತರ ಪ್ರದೇಶ (Informal Rationing Area) ಪಟ್ಟಣ ಪ್ರದೇಶಗಳ ವ್ಯಾಪ್ತಿಯಲ್ಲಿ ಮರುಹಂಚಿಕೆ ಆದೇಶವನ್ನು ಸಂಬಂಧಿಸಿದ ಜಿಲ್ಲಾಧಿಕಾರಿಗಳು ಹಾಗೂ ಗ್ರಾಮಾಂತರ ಪ್ರದೇಶಗಳಿಗೆ ಸಂಬಂಧಿಸಿದಂತೆ ಮರು ಹಂಚಿಕೆ ಆದೇಶವನ್ನು ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು ಹೊರಡಿಸುತ್ತಾರೆ. 2009–10ನೇ ಸಾಲಿನಲ್ಲಿ ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಬೀದರ್ ಇವರು ಸ್ವತಃ ಸಹಿ ಮಾಡಿ ಹೊರಡಿಸಿದ ಮರುಹಂಚಿಕೆ ಆದೇಶಗಳನ್ನು ಸಕ್ಷಮ ಪ್ರಾಧಿಕಾರಿಗಳಾದ ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳ ಅನುಮೋದನೆ ಇಲ್ಲದೆ ಬದಲಾವಣೆ ಮಾಡಿ ಶ್ರೀ ವಿಜಯಕುಮಾರ್ ಉಪ್ಪಿನ್ ಅವರು ಹೊರಡಿಸಿರುತ್ತಾರೆ. ಆ ರೀತಿಯ ಅಕ್ರಮ ಮರುಹಂಚಿಕೆ ಆದೇಶಗಳು ಈ ಕೆಳಕಂಡ ಮಾಹೆಗಳಲ್ಲಿ ಕಾರ್ಯಗತವಾಗಿರುತ್ತವೆ ಎಂದು ಲೆಕ್ಕತಪಾಸಣಾ ತಂಡವು ತಿಳಿಸಿರುತ್ತದೆ.

| | | |
|---|---|---|
| i. | ಮೇ | 2009 |
| ii. | ಜೂನ್ | 2009 |
| iii. | ಜುಲೈ | 2009 |
| iv. | ಅಕ್ಟೋಬರ್ | 2009 |
| v. | ಡಿಸೆಂಬರ್ | 2009 |

ಮೇಲಿನ ಕ್ರಮ ಸಂಖ್ಯೆ (ii) ರಿಂದ (v) ರ ಮಾಹೆಗಳಲ್ಲಿ ಜಿಲ್ಲಾಧಿಕಾರಿಗಳು ಹಾಗೂ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು ಸಹಿ ಮಾಡಿದ ಸೀಮೆಎಣ್ಣೆ ಹಂಚಿಕೆ ಆದೇಶಗಳಲ್ಲಿ ಇರುವ ಪಡಿತರ ಚೀಟಿ ಸಂಖ್ಯೆಗೂ ಹಾಗೂ ಆರೋಪಿಯು ಜಿಲ್ಲಾಧಿಕಾರಿಗಳ ಪರವಾಗಿ ಮತ್ತು ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳ ಪರವಾಗಿ ಸಹಿ ಮಾಡಿದ ಮರುಹಂಚಿಕೆ ಆದೇಶಗಳಲ್ಲಿ ಇರುವ ಪಡಿತರ ಚೀಟಿ ಸಂಖ್ಯೆಗಳಿಗೂ ವ್ಯತ್ಯಾಸವಿರುತ್ತದೆ. ಸಕ್ಷಮ ಪ್ರಾಧಿಕಾರಿಗಳು ಪ್ರತಿ ಪಡಿತರ ಚೀಟಿದಾರರಿಗೆ ನಿಗದಿಪಡಿಸಿದ ಸೀಮೆಎಣ್ಣೆ ಪ್ರಮಾಣವನ್ನು ಕಡೆಗಣಿಸಿ ತಮ್ಮದೇ ಆದ ವಿತರಣೆ ಪ್ರಮಾಣವನ್ನು ನಿಗದಿಪಡಿಸಿಕೊಂಡು ಕಾರ್ಯಗತಗೊಳಿಸಿರುವುದರಿಂದ, ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ಕರ್ತವ್ಯಲೋಪವೆಸಗಿರುವುದು ಕಂಡುಬರುತ್ತದೆ.

**5. ಮೇ 2009ರ ಮಾಹೆಯ ಜಿಲ್ಲಾಧಿಕಾರಿಗಳ ಸೀಮೆಎಣ್ಣೆ ಮರುಹಂಚಿಕೆ ಆದೇಶದ ಮೀಸಲು ಪ್ರಮಾಣವನ್ನು ದುರುಪಯೋಗಪಡಿಸಿಕೊಂಡಿರುವ ಬಗ್ಗೆ :**

ಬೀದರ್ ಅನೌಪಚಾರಿಕ ಪಡಿತರ ಪ್ರದೇಶ ಮತ್ತು ತಾಲ್ಲೂಕು ಪಟ್ಟಣ ಪ್ರದೇಶಗಳಿಗೆ ಬೀದರ್ ಜಿಲ್ಲಾಧಿಕಾರಿಗಳು ದಿನಾಂಕ 14–05–2009ರ ಮರುಹಂಚಿಕೆ ಆದೇಶದಲ್ಲಿ ಪ್ರತಿ ಪಡಿತರ ಚೀಟಿದಾರರಿಗೆ 4 ಲೀಟರ್‌ನಂತೆ ಒಟ್ಟು 513.176 ಕೆ.ಎಲ್. (ಕಿಲೋ ಲೀಟರ್) ಸೀಮೆಎಣ್ಣೆ ಪ್ರಮಾಣವನ್ನು ಪಡಿತರ ಚೀಟಿದಾರರಿಗೆ ವಿತರಿಸಲು ಮತ್ತು ಉಳಿಕೆ 271.357 ಕೆ.ಎಲ್. ಮೀಸಲು ದಾಸ್ತಾನಿಡಲು ಆದೇಶಿಸಲಾಗಿತ್ತು. ಸದರಿ ಆದೇಶವನ್ನು ಉಲ್ಲಂಘಿಸಿ ದಿನಾಂಕ 14–05–2009 ರಂದೇ ಆರೋಪಿ ಅವರಿಷ್ಟಾನುಸಾರ ಮೀಸಲು ಪ್ರಮಾಣವನ್ನು 24.967 ಕೆ.ಎಲ್.ಗೆ ಮಿತಿಗೊಳಿಸಿ ಪ್ರತಿ ಪಡಿತರ ಚೀಟಿದಾರರಿಗೆ 5 ಲೀಟರ್‌ನಂತೆ ವಿತರಣೆ ಮಾಡುವ ಮರುಹಂಚಿಕೆ ಆದೇಶವನ್ನು ಜಾರಿ ಮಾಡಿರುತ್ತಾರೆ. ಈ ರೀತಿ ಮೂಲ ಹಂಚಿಕೆ ಆದೇಶವನ್ನು ಉಲ್ಲಂಘಿಸಿ ತಮ್ಮದೇ ಆದ ಹಂಚಿಕೆ ಆದೇಶವನ್ನು ಜಾರಿ ಮಾಡಿ ಕಾರ್ಯಗತಗೊಳಿಸಿರುವುದರಿಂದ ಒಟ್ಟು 246.390 ಕೆ.ಎಲ್. ಸೀಮೆಎಣ್ಣೆ ಮೀಸಲು ದಾಸ್ತಾನನ್ನು ದುರುಪಯೋಗಪಡಿಸಿಕೊಂಡಿರುವುದು ಕಂಡುಬರುತ್ತದೆ.

ದುರುಪಯೋಗವಾದ ಸೀಮೆಎಣ್ಣೆ ಮತ್ತು ಅದರ ಬೆಲೆಯ ವಿವರಗಳು ಈ ಕೆಳಕಂಡಂತಿವೆ :

| | | |
|---|---|---|
| i. | ಜಿಲ್ಲಾಧಿಕಾರಿಗಳ ಆದೇಶದಂತೆ ಮೀಸಲು ಪ್ರಮಾಣ | 271.357 ಕೆ.ಎಲ್. |
| ii. | ಅಕ್ರಮ ಆದೇಶದ (ಉಪ ನಿರ್ದೇಶಕರು) ಮೀಸಲು ಪ್ರಮಾಣ | 24.967 ಕೆ.ಎಲ್. |
| iii. | ವ್ಯತ್ಯಾಸ | 246.390 ಕೆ.ಎಲ್. |

iv. 246.390 ಕೆ.ಎಲ್. x 1000 = 2,46,390 ಲೀಟರ್

(ಪ್ರತಿ ಲೀಟರ್ ಸೀಮೆಎಣ್ಣೆಯ ಪಡಿತರ ದರ ರೂ. 9.60)

v. ದುರುಪಯೋಗದ ವಾದ = ರೂ. 23,65,344–00/–

(2,46,390 x 9.60)

vi. ಸೀಮೆಎಣ್ಣೆ ಮೊತ್ತ :

ಮಾರುಕಟ್ಟೆ ದರಗಳ ಪ್ರಕಾರ ಪಡಿತರ ದರದ } = ರೂ. 47,30,688–00

ಎರಡು ಪಟ್ಟು ಮೊತ್ತವಾಗಿರುತ್ತದೆ

**6. ಗ್ರಾಮಾಂತರ ಪ್ರದೇಶದ ಪಡಿತರ ಸೀಮೆಎಣ್ಣೆ ಹಂಚಿಕೆ ಕಡಿತಗೊಳಿಸಿ ಅನೌಪಚಾರಿಕ ಪಡಿತರ ಪ್ರದೇಶಕ್ಕೆ ಹಂಚಿಕೆ ಮಾಡಿ ಎರಡೆರಡು ಹಂಚಿಕೆ ಆದೇಶಗಳನ್ನು ಜಾರಿ ಮಾಡಿ ಸೀಮೆಎಣ್ಣೆ ದಾಸ್ತಾನನ್ನು ದುರುಪಯೋಗಪಡಿಸಿಕೊಂಡಿರುವ ಬಗ್ಗೆ :**

2009–10ನೇ ಸಾಲಿನ ಪಡಿತರ ಸೀಮೆಎಣ್ಣೆ ಹಂಚಿಕೆಯಲ್ಲಿ ಜೂನ್ 2009, ಜುಲೈ 2009, ಅಕ್ಟೋಬರ್ 2009 ಮತ್ತು ಡಿಸೆಂಬರ್ 2009ರ ಮಾಹೆಗಳಲ್ಲಿ ಜಿಲ್ಲಾ ಮಟ್ಟದಲ್ಲಿ ಸೀಮೆಎಣ್ಣೆ ಮರುಹಂಚಿಕೆ ಮಾಡಲು ಸಕ್ಷಮ ಪ್ರಾಧಿಕಾರಿಗಳಾದ ಬೀದರ್ ಜಿಲ್ಲಾಧಿಕಾರಿಗಳು (ಅನೌಪಚಾರಿಕ ಪಡಿತರ ಪ್ರದೇಶ ಮತ್ತು ಪಟ್ಟಣ ಪ್ರದೇಶಕ್ಕೆ) ಹಾಗೂ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು (ಗ್ರಾಮಾಂತರ ಪ್ರದೇಶಕ್ಕೆ) ಪಡಿತರ ಚೀಟಿದಾರರಿಗೆ ಸೀಮೆಎಣ್ಣೆ ಹಂಚಿಕೆ ಮಾಡುವ ಸಂಬಂಧ ಸ್ವತಃ ಸಹಿ ಮಾಡಿ ಹಂಚಿಕೆ ಆದೇಶಗಳನ್ನು ಜಾರಿ ಮಾಡಿರುತ್ತಾರೆ. ಆದರೆ, ಆರೋಪಿಯು ಅವರ ಕಛೇರಿ ಸಿಬ್ಬಂದಿಯು ಜಿಲ್ಲಾಧಿಕಾರಿಗಳು ಹಾಗೂ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳ ಆದೇಶಗಳನ್ನು ನಿರ್ಲಕ್ಷಿಸಿ ಗ್ರಾಮಾಂತರ ಪ್ರದೇಶದ ಪಡಿತರ ಚೀಟಿದಾರರಿಗೆ ವಿತರಣೆ ಮಾಡಬೇಕಾದ ಪ್ರಮಾಣವನ್ನು ಕಡಿತಗೊಳಿಸಿ, ಬೀದರ್

ಅನೌಪಚಾರಿಕ ಪಡಿತರ ಪ್ರದೇಶಕ್ಕೆ ಹಂಚಿಕೆ ಮಾಡಿ ಜಿಲ್ಲಾಧಿಕಾರಿಗಳ ಪರವಾಗಿ ಮತ್ತು ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳ ಪರವಾಗಿ ಆರೋಪಿಯೇ ಸಹಿ ಮಾಡಿ ಅದೇ ದಿನಾಂಕದಲ್ಲಿ ಆದೇಶಗಳನ್ನು ಹೊರಡಿಸಿರುತ್ತಾರೆ. ಸಕ್ಷಮ ಪ್ರಾಧಿಕಾರದ ಪರವಾಗಿ ಆರೋಪಿಯು ಅವರದೇ ಆದ ಹಂಚಿಕೆ ಆದೇಶವನ್ನು ಜಾರಿಮಾಡುವುದರ ಮೂಲಕ ಗ್ರಾಮಾಂತರ ಪ್ರದೇಶದ ಪಡಿತರ ಸೀಮೆಎಣ್ಣೆ ವಿತರಣೆಯ ಪ್ರಮಾಣವನ್ನು ಕಡಿಮೆ ಮಾಡಿ, ಅನೌಪಚಾರಿಕ ಪಡಿತರ ಪ್ರದೇಶಕ್ಕೆ (ಐ.ಆರ್.ಎ.) ಹೆಚ್ಚುವರಿಯಾಗಿ ಹಂಚಿಕೆ ಮಾಡಿದ್ದು ದುರುಪಯೋಗವಾದ ನಿವ್ವಳ ಸೀಮೆಎಣ್ಣೆ ಪ್ರಮಾಣ ಈ ಕೆಳಕಂಡಂತಿದೆ.

| ಘೋಷ್ವಾರೆ ಪಟ್ಟಿ | | | |
|---|---|---|---|
| ಕ್ರ.ಸಂ. | ತಿಂಗಳು | ಪ್ರದೇಶ | ಪ್ರಮಾಣ |
| 1 | ಜೂನ್ 2009 | ಐ.ಆರ್.ಎ. ಪಟ್ಟಣಕ್ಕೆ ಹೆಚ್ಚುವರಿ ವಿತರಣೆ | 190.646 ಕೆ.ಎಲ್. |
| 2 | ಜುಲೈ 2009 | ಐ.ಆರ್.ಎ. ಪಟ್ಟಣಕ್ಕೆ ಹೆಚ್ಚುವರಿ ವಿತರಣೆ | 190.646 ಕೆ.ಎಲ್. |
| 3 | ಅಕ್ಟೋಬರ್ 2009 | ಐ.ಆರ್.ಎ. ಪಟ್ಟಣಕ್ಕೆ ಹೆಚ್ಚುವರಿ ವಿತರಣೆ | 190.304 ಕೆ.ಎಲ್. |
| 4 | ಡಿಸೆಂಬರ್ 2009 | ಐ.ಆರ್.ಎ. ಪಟ್ಟಣಕ್ಕೆ ಹೆಚ್ಚುವರಿ ವಿತರಣೆ | 103.516 ಕೆ.ಎಲ್. |

ದುರುಪಯೋಗದ ಒಟ್ಟು ಪ್ರಮಾಣ = 675.112 ಕೆ.ಎಲ್ X 1000 ಲೀಟರ್
= 6.75,112 ಲೀಟರ್
ಚಿಲ್ಲರೆ ಪಡಿತರ ಹಂಚಿಕೆ ದರದ ಪ್ರಕಾರ = 6.75.112 X ರೂ. 9.60
ದುರುಪಯೋಗದ ಒಟ್ಟು ಮೊತ್ತ = ರೂ. 64,81,075.00/-
ಮಾರುಕಟ್ಟೆ ದರದ ಪ್ರಕಾರ } = ರೂ. 64,81,075 X 2 = ರೂ. 1,29,62,150.00
ದುರುಪಯೋಗದ ಮೊತ್ತದ ಎರಡರಷ್ಟು

**7. ಪ್ರಕೃತಿ ವಿಕೋಪ ಪರಿಹಾರಕ್ಕಾಗಿ ಮೀಸಲಿರಿಸಿದ ಸೀಮೆಎಣ್ಣೆಯ ದುರುಪಯೋಗದ ಬಗ್ಗೆ :**

2009ರ ಅಕ್ಟೋಬರ್ ಮಾಹೆಯಲ್ಲಿ ಉತ್ತರ ಕರ್ನಾಟಕದಲ್ಲಿ ಕೆಲವು ಜಿಲ್ಲೆಗಳು ಪ್ರವಾಹಕ್ಕೊಳಗಾಗಿ ತೊಂದರೆಗೊಳಗಾಗಿದ್ದನ್ನು ಮನಗೊಂಡು ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರು ಅಧಿಕೃತ ಜ್ಞಾಪನ ಸಂಖ್ಯೆ : ಸಿ.ಎಫ್.ಎಸ್./ಪಿಡಿ.3/27(3)/2009-10, ದಿನಾಂಕ 07-10-2009 ರಲ್ಲಿ ತುರ್ತು ಸಂದರ್ಭದ ಬಳಕೆಗಾಗಿ 324 ಕಿಲೋ ಲೀಟರ್ ಸೀಮೆಎಣ್ಣೆಯನ್ನು ಜಿಲ್ಲೆಯಲ್ಲಿ ಮೀಸಲು ದಾಸ್ತಾನಿರಿಸಲು ಆದೇಶ ಜಾರಿ ಮಾಡಿರುತ್ತಾರೆ. ಸದರಿ ಮೀಸಲು ಸೀಮೆಎಣ್ಣೆಯನ್ನು ತುರ್ತು ಸಂದರ್ಭದಲ್ಲಿ ಸಂಬಂಧಪಟ್ಟ ಜಿಲ್ಲಾಡಳಿತವು ಸ್ಥಾಪಿಸಿದ ಗಂಜಿ ಕೇಂದ್ರಗಳ ಬಳಕೆಗಾಗಿ/ಪುನರ್ ವಸತಿ ಕೇಂದ್ರಗಳ ಬಳಕೆಗಾಗಿ/ಪ್ರವಾಹ ಪೀಡಿತ ಸಂತ್ರಸ್ಥರಿಗೆ ಹೆಚ್ಚುವರಿ ಪ್ರಮಾಣದಲ್ಲಿ ವಿತರಿಸುವ ಸಲುವಾಗಿ ಜಿಲ್ಲಾಧಿಕಾರಿಗಳ ವಿವೇಚನೆಗೊಳಪಟ್ಟು ಬಳಸಿಕೊಳ್ಳಬಹುದೆಂದು ಹಾಗೂ ಅದಕ್ಕೆ ಸಂಬಂಧಿಸಿದ ಮಾಹಿತಿಯನ್ನು ಇಲಾಖೆಗೆ ಸಲ್ಲಿಸುವಂತೆ ಆದೇಶದಲ್ಲಿ ಆಯುಕ್ತರು ಸೂಚಿಸಿರುತ್ತಾರೆ.

ಆದರೆ, ಬೀದರ್ ಜಿಲ್ಲೆಯಲ್ಲಿ ಪ್ರವಾಹ ಉಂಟಾಗಿ ಪಡಿತರ ಸೀಮೆಎಣ್ಣೆಗೆ ಬೇಡಿಕೆ ಇರುವ ಬಗ್ಗೆ ಯಾವುದೇ ಮನವಿಗಳು ಸಲ್ಲಿಕೆಯಾಗದಿದ್ದರೂ ಆಯುಕ್ತರು ಪ್ರವಾಹ ಪೀಡಿತರ ಸಂತ್ರಸ್ಥರಿಗೆ ಮೀಸಲಿರಿಸಿದ 324 ಕಿಲೋ ಲೀಟರ್ ಸೀಮೆಎಣ್ಣೆಯನ್ನು ಸಕ್ಷಮ ಪ್ರಾಧಿಕಾರಿಗಳ (ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು) ಪರವಾಗಿ ಶ್ರೀ ವಿಜಯಕುಮಾರ್ ಉಪ್ಪಿನ್, ಅವರು ತಮ್ಮ ಇಚ್ಛಾನುಸಾರ ಸಹಿ ಮಾಡಿ ಪ್ರತ್ಯೇಕ ಆದೇಶಗಳನ್ನು ಹೊರಡಿಸಿ ಸಾರ್ವಜನಿಕ ವಿತರಣಾ ಪದ್ಧತಿಯಡಿ ಬಳಸಿಕೊಂಡಿರುವುದು ಕಂಡುಬಂದಿದೆ.

ಪ್ರವಾಹ ಪೀಡಿತ ಸಂತ್ರಸ್ಥರಿಗಾಗಿ ಮೀಸಲಿರಿಸಿದ ಸೀಮೆಎಣ್ಣೆಯ ಒಟ್ಟು ಪ್ರಮಾಣ 3,24,000 ಲೀಟರ್ (324 ಕೆ.ಎಲ್.) (ಪ್ರತಿ ಲೀಟರ್‌ಗೆ ರೂ. 9.60 ರಂತೆ) ಗಳ ಮೊತ್ತ 31,10,400/- ಗಳು ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟಾಗಿರುತ್ತದೆ. ಸದರಿ ನಷ್ಟಕ್ಕೆ ಆರೋಪಿಯೇ ಹೊಣೆಗಾರರಾಗಿರುತ್ತಾರೆಂದು, ಸರ್ಕಾರ ನಿಗದಿಪಡಿಸಿದ ದರಗಳ ಪ್ರಕಾರ ದುರುಪಯೋಗದ ಮೊತ್ತವನ್ನು ಮಾರುಕಟ್ಟೆ ಬೆಲೆಗೆ ಪರಿವರ್ತಿಸಿಕೊಂಡಲ್ಲಿ ರೂ. 62,20,800/- ಗಳಾಗುತ್ತದೆ. (ರೂ. 31,10,400 X 2 = 62,20,800).

**8. ಆಡಳಿತ ವರ್ಗದ ವಿವರ**

ದಿನಾಂಕ 01-04-2007 ರಿಂದ 31-12-2009ರ ವರೆಗಿನ ಅವಧಿಯ ಆಡಳಿತ ವರ್ಗದ ವಿವರ ಈ ಕೆಳಕಂಡಂತೆ ಇರುವುದು.

| ಕ್ರ. ಸಂ. | ಹುದ್ದೆಗಳು | ಹೆಸರು ಮತ್ತು ದಿನಾಂಕ |
|---|---|---|
| 1 | ಜಿಲ್ಲಾಧಿಕಾರಿಗಳು | 1. ಶ್ರೀ ಮನೀಷ್‌ಮೌದ್ಗಿಲ್, ಭಾ.ಆ.ಸೇ. ದಿ : 01-04-07 ರಿಂದ 03-09-07<br>2. ಶ್ರೀ ಹರ್ಷಗುಪ್ತಾ, ಭಾ.ಆ.ಸೇ. ದಿ : 03-09-07 ರಿಂದ 31-03-10 |
| 2 | ಉಪ ನಿರ್ದೇಶಕರು | 1. ಶ್ರೀ ವಿಜಯಕುಮಾರ್ ಉಪ್ಪಿನ್, ದಿ : 20-02-07 ರಿಂದ 29-12-09<br>2. ಶ್ರೀಮತಿ ಜಹೀರಾನಸಿಮ, ಕೆ.ಎ.ಎಸ್., ಸಹಾಯಕ ಆಯುಕ್ತರು (ಪ್ರಭಾರ) |
| 3 | ವ್ಯವಸ್ಥಾಪಕರು | 1. ಶ್ರೀ ಟಿ.ಎಲ್ ಸುಭಾಸ್ (ಪ್ರಭಾರ) ದಿ : 01-04-07 ರಿಂದ 25-05-07<br>2. ಶ್ರೀ ಪ್ರಕಾಶ್ ಚಿಂಚೋಳ್ಳಿಕ್ಕರ್, ಕಂದಾಯ ಶಿರಸ್ತೆದಾರರು, ದಿ : 29-05-07 ರಿಂದ 31.03.10. |
| 4 | ಲೆಕ್ಕ ಅಧೀಕ್ಷಕರು | 1. ಶ್ರೀ ಟಿ.ಎಲ್. ಸುಭಾಸ್ (ಪ್ರಭಾರ) ದಿ : 01-04-07 ರಿಂದ 25-05-07<br>2. ಶ್ರೀ ಮೌಲಾಸಾಬ್, ಪ್ರ.ದ.ಸ. (ಪ್ರಭಾರ) ದಿ : 01-04-08 ರಿಂದ 20-11-08<br>3. ಶ್ರೀ ಕಡ್ಡಿ ಶಾಮಣ್ಣ, ದಿನಾಂಕ 21-11-08 ರಿಂದ 31-03-10. |
| 5 | ಆಹಾರ ಶಿರಸ್ತೇದಾರರು | 1. ಶ್ರೀ ಪ್ರಕಾಶ್ ಚಿಂಚೋಳ್ಳಿಕ್ಕರ್, 29-05-07 ರಿಂದ 31-03-10 |
| 6 | ಆಹಾರ ನಿರೀಕ್ಷಕರು | 1. ಶ್ರೀ ಮನೋಹರ್ ಹಾದಿಮನಿ, ಅನೌಪಚಾರಿಕ ಪಡಿತರ ಪ್ರದೇಶ |

| | | |
|---|---|---|
| | | 2. ಶ್ರೀ ಸುಧಾಕರ, ದ್ವಿ.ದ.ಸ., ಅ.ಪ.ಪ್ರ ಪ್ರಭಾರ, ದಿ : 11–05–07 ರಿಂದ 06–02–10<br>3. ಶ್ರೀ ರವಿ ಸೂರ್ಯವಂಶಿ, ದ್ವಿ.ದ.ಸ., ಅ.ಪ.ಪ್ರ. ಬೀದರ್ (ಪ್ರಭಾರ) ದಿ : 11–05–07 ರಿಂದ 01–03–08 |

**ದಿನಾಂಕ 31–03–2010 ರವರೆಗಿನ ಅವಧಿಯಲ್ಲಿ ತಹಶೀಲ್ದಾರ್‌ರವರ ಕಛೇರಿಯ ಆಹಾರ ನಿರೀಕ್ಷಕರ ವಿವರಗಳು ಈ ಕೆಳಕಂಡಂತೆ ಇರುತ್ತದೆ**

| ಕ್ರ.ಸಂ. | ಹೆಸರು ಮತ್ತು ಹುದ್ದೆ | ದಿನಾಂಕ | |
|---|---|---|---|
| 1 | ಶ್ರೀ ಮಾರುತಿ ನಿರಾಟೆ, ಆಹಾರ ನಿರೀಕ್ಷಕರು, ತಹಶೀಲ್ದಾರ್ ಕಛೇರಿ, ಬೀದರ್ | 01–04–2007 | 31–03–2010 |
| 2 | ಶ್ರೀ ಸಿದ್ದಪ್ಪ, ಆಹಾರ ನಿರೀಕ್ಷಕರು, ತಹಶೀಲ್ದಾರ್ ಕಛೇರಿ, ಬೀದರ್ | 09–01–2009 | 31–03–2010 |
| 3 | ಶ್ರೀ ರಾಮದಾಸ, ಆಹಾರ ಶಿರಸ್ತೇದಾರರು, ತಹಶೀಲ್ದಾರ್ ಕಛೇರಿ, ಔರಾದ್ | 01–04–2007 | 31–03–2010 |
| 4 | ಶ್ರೀ ಐ.ಹೆಚ್. ಗೋಂಬಿ, ಆಹಾರ ಶಿರಸ್ತೇದಾರರು, ತಹಶೀಲ್ದಾರ್ ಕಛೇರಿ, ಭಾಲ್ಕಿ | 01–04–2007 | 31–03–2010 |
| 5 | ಶ್ರೀ ರಾಮಚಂದ್ರ ರೋಡೆ, ಆಹಾರ ನಿರೀಕ್ಷರು, ತಹಶೀಲ್ದಾರ್ ಕಛೇರಿ, ಭಾಲ್ಕಿ | 07–04–2007 | 26–03–2010 ಮೃತಪಟ್ಟಿರುತ್ತಾರೆ |
| 6 | ಶ್ರೀ ನಾಗೇಂದ್ರ ಭಾಸ್ಕತಕರ, ಆಹಾರ ನಿರೀಕ್ಷರು, ತಹಶೀಲ್ದಾರ್ ಕಛೇರಿ, ಭಾಲ್ಕಿ | 16–12–2008 | 17–03–2009 (ಅಮಾನತ್ತು ಗೊಂಡಿರುತ್ತಾರೆ) |
| 7 | ಶ್ರೀ ಅಬ್ದುಲ್ ಹಮೀದ, ಆಹಾರ ಶಿರಸ್ತೇದಾರರು, ತಹಶೀಲ್ದಾರ್ ಕಛೇರಿ, ಬಸವಕಲ್ಯಾಣ | 01–04–2007 | 06–02–2009 |
| 8 | ಶ್ರೀ ಶಿವರೆಡ್ಡಿ, ಆಹಾರ ಶಿರಸ್ತೇದಾರರು, ತಹಶೀಲ್ದಾರ್ ಕಛೇರಿ, ಬಸವಕಲ್ಯಾಣ | 07–02–2009 | 31–03–2010 |
| 9 | ಶ್ರೀ ಜಿ.ಎಸ್. ಉಪ್ಪಾರ, ಆಹಾರ ನಿರೀಕ್ಷಕರು, ತಹಶೀಲ್ದಾರ್ ಕಛೇರಿ, ಬಸವಕಲ್ಯಾಣ | 01–04–2007 | 30–06–2008 (ನಿವೃತ್ತಿ ಹೊಂದಿರುತ್ತಾರೆ) |
| 10 | ಶ್ರೀ ಸುರ್ಯಕಾಂತ ಘುಲಾರಿ, ಆಹಾರ ನಿರೀಕ್ಷಕರು, ತಹಶೀಲ್ದಾರ್ ಕಛೇರಿ, ಬಸವಕಲ್ಯಾಣ | 08–07–2008 | 18–11–2009 |
| 11 | ಶ್ರೀ ಮರೆಗಪ್ಪ, ಆಹಾರ ನಿರೀಕ್ಷಕರು, ತಹಶೀಲ್ದಾರ್ ಕಛೇರಿ, ಬಸವಕಲ್ಯಾಣ | 27–11–2009 | 31–03–2010 |
| 12 | ಶ್ರೀ ಶಿವಶರಣಪ್ಪ, ಆಹಾರ ಶಿರಸ್ತೇದಾರರು, ತಹಶೀಲ್ದಾರ್ ಕಛೇರಿ, ಹುಮ್ನಾಬಾದ್ | 01–04–2007 | 07–02–2010 |
| 13 | ಶ್ರೀ ಕಾಶಿನಾಥ್ ಹಿರೇಮಣಿಕರ, ಆಹಾರ ಶಿರಸ್ತೇದಾರರು, ತಹಶೀಲ್ದಾರ್ ಕಛೇರಿ, ಹುಮ್ನಾಬಾದ್ | 17–02–2010 | 31–03–2010 |
| 14 | ಶ್ರೀ ವಿಜಯಕುಮಾರ, ಆಹಾರ ನಿರೀಕ್ಷಕರು, ತಹಶೀಲ್ದಾರ್ ಕಛೇರಿ, ಹುಮ್ನಾಬಾದ್ | 01–04–2010 | 31–03–2010 |
| 15 | ಶ್ರೀ ಡಿ.ಬಿ. ಪಾಟೀಲ, ಆಹಾರ ನಿರೀಕ್ಷಕರು, ತಹಶೀಲ್ದಾರ್ ಕಛೇರಿ, ಹುಮ್ನಾಬಾದ್ | 13–11–2008 | 18–11–2009 |

9. **ಜಿಲ್ಲಾಧಿಕಾರಿಗಳು, ಬೀದರ್ ಇವರ ಕೋರಿಕೆಯಂತೆ ಮೇಲೆ ವಿವರಿಸಿದ ದುರುಪಯೋಗ/ನ್ಯೂನತೆಗಳನ್ನು ಆಯುಕ್ತರು, ಆರ್ಹ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರಿಂದ ನಿಯೋಜಿಸಿದ ಲೆಕ್ಕ ತಪಾಸಣಾ ತಂಡವು ಪತ್ತೆ ಹಚ್ಚಿದ್ದು ಪ್ರಮುಖವಾಗಿ ಈ ಕೆಳಕಂಡ ಅಂಶಗಳನ್ನು ಗುರುತಿಸಬಹುದು.**

i. ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರ ಕಛೇರಿಯಿಂದ ಮಾಸಿಕ ಆಹಾರಧಾನ್ಯ ಹಂಚಿಕೆ ಆದೇಶದಲ್ಲಿ ನಮೂದಿಸಿದ ಪಡಿತರ ಚೀಟಿಗಳ ಸಂಖ್ಯೆಗೂ, ಉಪ ನಿರ್ದೇಶಕರು ಮರು ಹಂಚಿಕೆ ಮಾಡುವಾಗ ಆಹಾರಧಾನ್ಯ ವಿತರಣೆಗಾಗಿ ಪರಿಗಣಿಸಿದ ಪಡಿತರ ಚೀಟಿಗಳ ಸಂಖ್ಯೆಗೂ ಪ್ರತಿ ಮಾಹೆಯಲ್ಲಿ ವ್ಯತ್ಯಾಸವಿರುತ್ತದೆ. ಅಂದರೆ, ಉಪ ನಿರ್ದೇಶಕರು ಹೆಚ್ಚು ಪಡಿತರ ಚೀಟಿಗಳ ಸಂಖ್ಯೆಯನ್ನು ನಮೂದಿಸಿರುತ್ತಾರೆ. ಈ ಬಗ್ಗೆ ಮಾಹಿತಿಯನ್ನು ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರ ಗಮನಕ್ಕೆ ತಂದಿರುವುದಿಲ್ಲ.

ii. ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರು ಬೀದರ್ ಜಿಲ್ಲೆಗೆ ಹಂಚಿಕೆ ಮಾಡಿದ ಸೀಮೆಎಣ್ಣೆ ಪ್ರಮಾಣಕ್ಕೆ ಅನುಗುಣವಾಗಿ ಜಿಲ್ಲಾಧಿಕಾರಿಗಳು ಹಾಗೂ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಮರುಹಂಚಿಕೆ ಆದೇಶಗಳನ್ನು ಮಾಡಿರುತ್ತಾರೆ. ಆದರೆ, ಕೆಲವು ಮಾಹೆಗಳಲ್ಲಿ ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಅನುಮೋದಿಸಲ್ಪಟ್ಟ ಆದೇಶಗಳನ್ನು ಬದಲಾಯಿಸಿ ಹಂಚಿಕೆ ಮತ್ತು ವಿತರಣೆ ಪ್ರಮಾಣದಲ್ಲಿ ವ್ಯತ್ಯಾಸ ಮಾಡಿ ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಪರವಾಗಿ ಆರೋಪಿಯೇ ಸಹಿ ಮಾಡಿ, ಅದೇ ಆದೇಶಗಳನ್ನು ಜಾರಿಗೊಳಿಸಿರುತ್ತಾರೆ. ಆ ರೀತಿ ಆದೇಶವನ್ನು ಬದಲಾಯಿಸಲು ಆಹಾರಧಾನ್ಯ ಮತ್ತು ಸೀಮೆಎಣ್ಣೆ ಮರುಹಂಚಿಕೆ ಮಾಡಲು ಸಕ್ಷಮ ಪ್ರಾಧಿಕಾರಿಗಳಾದ ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಆದೇಶ/ಅನುಮತಿ ಪಡೆದಿರುವುದಿಲ್ಲ.

**10. ಹಾಗೆಯೇ, ಸರ್ಕಾರದ ಬೊಕ್ಕಸಕ್ಕೆ ಈ ಕೆಳಕಂಡಂತೆ ಆರ್ಥಿಕ ನಷ್ಟ ಉಂಟಾಗಿರುವುದಾಗಿ ಲೆಕ್ಕ ತಪಾಸಣಾ ತಂಡವು ತಿಳಿಸಿದೆ.**

| | | |
|---|---|---|
| i. | ಪ್ರವಾಹ ಪೀಡಿತರ ಪರಿಹಾರಕ್ಕಾಗಿ ಹಂಚಿಕೆಯಾದ ಅಕ್ಕಿ–ಗೋಧಿಯ ಮುಂಗಡ ಎತ್ತುವಳಿಯಿಂದಾದ ನಷ್ಟ. } | ರೂ. 1,15,20,506 |
| ii. | ಮೇ–2009ರ ಮಾಹೆಯಲ್ಲಿ ಜಿಲ್ಲಾಧಿಕಾರಿಗಳ ಮರುಹಂಚಿಕೆ ಆದೇಶದ ದುರುಪಯೋಗದಿಂದಾದ ನಷ್ಟ } | ರೂ. 47,30,688 |
| iii. | ಗ್ರಾಮಾಂತರ ಪ್ರದೇಶದ ಸೀಮೆಎಣ್ಣೆಯನ್ನು ಅನೌಪಚಾರಿಕ ಪಡಿತರ ಪ್ರದೇಶಕ್ಕೆ ಮರುಹಂಚಿಕೆ ಮಾಡಿರುವ ಎರಡೆರಡು ಮರುಹಂಚಿಕೆ (IRA) ಆದೇಶಗಳ ಜಾರಿಯಿಂದಾಗಿ ಆದ ನಷ್ಟ. } | ರೂ. 1,29,62,150 |
| iv. | ಪ್ರಕೃತಿ ವಿಕೋಪ ಪರಿಹಾರಕ್ಕಾಗಿ ಮೀಸಲಾಗಿರಿಸಿದ ಮೀಸಲು ಸೀಮೆಎಣ್ಣೆಯನ್ನು ದುರುಪಯೋಗಪಡಿಸಿಕೊಂಡಿರುವುದರಿಂದಾದ ನಷ್ಟ } | ರೂ. 62,20,800 |
| | **ಒಟ್ಟು** | **ರೂ. 354,34,144** |

ಒಟ್ಟಾರೆ, ಸರ್ಕಾರಕ್ಕಾಗಲಿ ಅಥವಾ ಸಕ್ಷಮ ಪ್ರಾಧಿಕಾರಗಳಿಗಾಗಲಿ ಮಾಹಿತಿ ನೀಡದೆ ಆರೋಪಿಯು ಅವರ ಹಂತದಲ್ಲಿಯೇ ಆಹಾರಧಾನ್ಯ/ಸೀಮೆಎಣ್ಣೆ ಮರುಹಂಚಿಕೆ ಆದೇಶಗಳನ್ನು ಬದಲಾವಣೆ ಮಾಡಿಕೊಳ್ಳುವುದರ ಮೂಲಕ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ಸರ್ಕಾರಕ್ಕೆ ಸುಮಾರು ರೂ. 3,54,34,144.00/– ಗಳ ಆರ್ಥಿಕ ನಷ್ಟ ಉಂಟಾಗಲು ಶ್ರೀ ವಿಜಯಕುಮಾರ್ ಉಪ್ಪಿನ್, ಉಪ ನಿರ್ದೇಶಕರುಗಳು ಕಾರಣರಾಗಿದ್ದು ಅವರಿಗೆ ಬೆಂಬಲ ನೀಡಿರುವ ಶ್ರೀ ಸುಧಾಕರ, ಬೀದರ್ ಅನೌಪಚಾರಿಕ ಪಡಿತರ ಪ್ರದೇಶದ ಪ್ರಭಾರ ಆಹಾರ ನಿರೀಕ್ಷಕರು ಹಾಗೂ ಶ್ರೀ ಪ್ರಕಾಶ ಚಿಂಚೋಳಿಕರ್ ರವರುಗಳ ಮೇಲೆ ಸಿಸಿಎ ನಿಯಮಗಳ ಪ್ರಕಾರ ಆಡಳಿತಾತ್ಮಕ ಕ್ರಮಕೈಗೊಂಡು ಸರ್ಕಾರದ ಬೊಕ್ಕಸಕ್ಕೆ ಆಗಿರುವ ನಷ್ಟದ ಪ್ರಮಾಣವನ್ನು ವಸೂಲಿ ಮಾಡಬೇಕಿರುತ್ತದೆಂದು ಲೆಕ್ಕ ತಪಾಸಣಾ ತಂಡವು ತಿಳಿಸಿರುತ್ತದೆ.

ಆದುದರಿಂದ, ಶ್ರೀ ವಿಜಯಕುಮಾರ್ ಉಪ್ಪಿನ್, ಉಪ ನಿರ್ದೇಶಕರು ಇವರ ಅಧಿಕಾರಾವಧಿಯಲ್ಲಿ ಅಧಿಕಾರ ದುರುಪಯೋಗ, ಕರ್ತವ್ಯಲೋಪ ಹಾಗೂ ಅದರಿಂದ ಸರ್ಕಾರಕ್ಕೆ ಉಂಟಾದ ಆರ್ಥಿಕ ನಷ್ಟದ ಪ್ರಕರಣಗಳ ಬಗ್ಗೆ ಸಮಗ್ರ ತನಿಖೆ ನಡೆಸುವುದು ಸೂಕ್ತವೆಂದು ಸರ್ಕಾರವು ತೀರ್ಮಾನಿಸಿದೆ, ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 50 ಆಇಸೇ 2011, ಬೆಂಗಳೂರು, ದಿನಾಂಕ 07ನೇ ಏಪ್ರಿಲ್ 2011**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಪ್ರಕರಣವನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಿದ್ದು, ಶ್ರೀ ವಿಜಯಕುಮಾರ್ ಉಪ್ಪಿನ್, ಅವರು ಬೀದರ್‌ನಲ್ಲಿ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಉಪ ನಿರ್ದೇಶಕರಾಗಿದ್ದ ಅವಧಿಯಲ್ಲಿ ಅಧಿಕಾರ ದುರುಪಯೋಗಪಡಿಸಿಕೊಂಡಿರುವುದು, ಕರ್ತವ್ಯ ನಿರ್ವಹಣೆಯಲ್ಲಿ ಲೋಪವೆಸಗಿರುವುದು ಮತ್ತು ಅದರಿಂದ ಸರ್ಕಾರಕ್ಕೆ ಸುಮಾರು ರೂ. 3,54,34,144/– ಆರ್ಥಿಕ ನಷ್ಟ ಉಂಟಾಗಿರುವುದು ವಿಶೇಷ ಲೆಕ್ಕ ತಪಾಸಣಾ ವರದಿಯಿಂದ ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ, ಸಮಗ್ರವಾದ ತನಿಖೆ ನಡೆಸಿ ಸರ್ಕಾರಕ್ಕೆ ವರದಿ ಸಲ್ಲಿಸುವ ಕುರಿತು ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984ರ ಕಲಂ 7(2ಎ) ರಡಿಯಲ್ಲಿ ಮಾನ್ಯ ಲೋಕಾಯುಕ್ತರವರಿಗೆ ವಹಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ. ಸೋಮಣ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
(ಆಹಾರ–1 ಮತ್ತು 2 ಶಾಖೆ),
ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್. 1150

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯ ಮುಖ್ಯ ಹಣಕಾಸು ಅಧಿಕಾರಿಯವರಿಗೆ ಎ.ಸಿ. ಬಿಲ್ ಮೂಲಕ ಖಜಾನೆಯಿಂದ ಹಣ ಸೆಳೆಯಲು ಅಧಿಕಾರ ನೀಡಿರುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಎಫ್‌ಡಬ್ಲ್ಯೂ/ಕೆಹೆಚ್‌ಎಸ್‌ಡಿಆರ್‌ಪಿ/ಎಸ್‌ಇಸಿಟಿ–1/2006, ದಿನಾಂಕ 30–12–2006.
2. ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಎಫ್‌ಡಬ್ಲ್ಯೂ/ಕೆಹೆಚ್‌ಎಸ್‌ಡಿಆರ್‌ಪಿ/ಎಸ್‌ಇಸಿಟಿ/ಜಿಪಿ–1/2007, ದಿನಾಂಕ 31–7–2008.
3. ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಎಫ್‌ಡಬ್ಲ್ಯೂ/ಕೆಹೆಚ್‌ಎಸ್‌ಡಿಆರ್‌ಪಿ/ಎಸ್‌ಇಸಿಟಿ/ಜಿಪಿ–1/2007, ದಿನಾಂಕ 4–9–2008.
4. ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಎಫ್‌ಡಬ್ಲ್ಯೂ (ಪಿಆರ್) 63 ಡಬ್ಲ್ಯೂಬಿಎ 2009, ಬೆಂಗಳೂರು, ದಿನಾಂಕ 21–04–2009.
5. ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಎಫ್‌ಡಬ್ಲ್ಯೂ (ಪಿಆರ್) 63 ಡಬ್ಲ್ಯೂಬಿಎ 2009, ಬೆಂಗಳೂರು, ದಿನಾಂಕ 24–05–2010.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಶ್ವಬ್ಯಾಂಕ್ ನೆರವಿನ ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯನ್ನು ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ. ಯೋಜನೆ ಕಛೇರಿಯಲ್ಲಿ ತುರ್ತು ಸಂದರ್ಭಗಳಲ್ಲಿ ಕಛೇರಿ ವೆಚ್ಚವನ್ನು ಭರಿಸಲು

ಸಾಧ್ಯವಾಗುವಂತೆ ರೂ. 75,000–00 ಗಳು ಅಥವಾ ಕಡಿಮೆ ಹಣವನ್ನು ಎ.ಸಿ. ಬಿಲ್ ಮೂಲಕ ಖಜಾನೆಯಿಂದ ಸೆಳೆಯಲು ಯೋಜನೆಯ ಮುಖ್ಯ ಹಣಕಾಸು ಅಧಿಕಾರಿಯವರಿಗೆ ಮೇಲೆ (2) ರಿಂದ (5) ರಲ್ಲಿ ಓದಲಾದ ಸರ್ಕಾರಿ ಆದೇಶಗಳನ್ವಯ ಕ್ರಮವಾಗಿ 2007–08, 2008–09, 2009–10 ಮತ್ತು 2010–11ನೇ ಸಾಲಿನಲ್ಲಿ ಅಧಿಕಾರ ನೀಡಲಾಗಿತ್ತು. ಸದರಿ ಸೌಲಭ್ಯವನ್ನು 2011–12ನೇ ಸಾಲಿನಲ್ಲಿ ಮುಂದುವರೆಸಲು ಪ್ರಸ್ತಾಪಿಸಲಾಗಿದೆ.

ಆದ್ದರಿಂದ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಎಫ್‌ಡಬ್ಲ್ಯೂ (ಪಿಆರ್) 63 ಡಬ್ಲ್ಯೂಬಿಎ 2009, ಬೆಂಗಳೂರು, ದಿನಾಂಕ 13ನೇ ಏಪ್ರಿಲ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಸರ್ಕಾರವು, ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯ ಕಾರ್ಯಚಟುವಟಿಕೆಗಳ ಸಂಬಂಧ ತುರ್ತು ಸಂದರ್ಭಗಳಲ್ಲಿ ವೆಚ್ಚವನ್ನು ಭರಿಸುವ ಸಲುವಾಗಿ 2011–12 ನೇ ಸಾಲಿನಲ್ಲಿ ರೂ. 75,000–00 (ಎಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ) ಅಥವಾ ಕಡಿಮೆ ಹಣವನ್ನು ಎ.ಸಿ. ಬಿಲ್ ಮೂಲಕ ಲೆಕ್ಕಶೀರ್ಷಿಕೆ "2210–06–800–0–84–051 (ಸಾಮಾನ್ಯ ವೆಚ್ಚಗಳು)" ಅಡಿಯಲ್ಲಿ ಖಜಾನೆಯಿಂದ ಸೆಳೆಯಲು ಯೋಜನಾ ಕಛೇರಿಯ ಮುಖ್ಯ ಹಣಕಾಸು ಅಧಿಕಾರಿ ಇವರಿಗೆ ಅಧಿಕಾರ ನೀಡಿದೆ. ಈ ಸೌಲಭ್ಯವು 31–03–2012 ರವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಶಶಿಧರ್,**
ಸರ್ಕಾರದ ಉಪ ಕಾರ್ಯದರ್ಶಿ,
ಕೆಹೆಚ್‌ಎಸ್‌ಡಿಆರ್‌ಪಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್. 1151

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** 2011–12ನೇ ಸಾಲಿಗೆ ಇಲಾಖೆಯ ಅಂಗ ಸಂಸ್ಥೆಗಳ ಕಾರ್ಯಚಟುವಟಿಕೆ ಮತ್ತು ಆಡಳಿತ ನಿರ್ವಹಣೆಗಾಗಿ ಮೊದಲನೇ ಕಂತಿನ ಅನುದಾನ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ವಿಯಇ 189 ವಿತ್ರಮ 2010, ದಿನಾಂಕ 19–03–2011.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ, ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು ಮುಂದುವರಿಸಿ, 2011–12ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 3425–60–200–0–01 (101)(ಯೋ) ವೈಜ್ಞಾನಿಕ ಸಂಸ್ಥೆಗಳಿಗೆ ಸಹಾಯಾನುದಾನವಾಗಿ ಒಟ್ಟು ರೂ.500.00 ಲಕ್ಷಗಳ ಅನುದಾನವನ್ನು ಕಲ್ಪಿಸಲಾಗಿದೆ.

2011–12ನೇ ಸಾಲಿನಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಅಂಗ ಸಂಸ್ಥೆಗಳಾದ ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿ, ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿ, ಜವಹರಲಾಲ್ ನೆಹರು ತಾರಾಲಯ ಹಾಗೂ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ಈ ಸಂಸ್ಥೆಗಳು ಹಮ್ಮಿಕೊಂಡಿರುವ ವೈಜ್ಞಾನಿಕ ಕಾರ್ಯಚಟುವಟಿಕೆ ಮತ್ತು ಆಡಳಿತ ನಿರ್ವಹಣೆಗಾಗಿ ಮೊದಲನೇ ಕಂತಿನ ಸಹಾಯಾನುದಾನ ಬಿಡುಗಡೆ ಮಾಡಬೇಕಾಗಿದೆ. ಆದ್ದರಿಂದ ಮೊದಲನೇ ಕಂತಿನ ಅನುದಾನ ಬಿಡುಗಡೆಗೆ ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಿಯಇ 50 ವಿತ್ರಮ 2011, ಬೆಂಗಳೂರು, ದಿನಾಂಕ 13ನೇ ಏಪ್ರಿಲ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ವೈಜ್ಞಾನಿಕ ಸಂಸ್ಥೆಗಳಿಗೆ ಸಹಾಯಾನುದಾನವಾಗಿ ಕಾಯ್ದಿರಿಸಲಾದ ರೂ.500.00 ಲಕ್ಷಗಳಲ್ಲಿ ಪ್ರಸಕ್ತ ಆರ್ಥಿಕ ಸಾಲಿನಲ್ಲಿ ಕೆಳಕಂಡ 4 ಸಂಸ್ಥೆಗಳು ಹಮ್ಮಿಕೊಂಡಿರುವ ಕಾರ್ಯಚಟುವಟಿಕೆ ಮತ್ತು ಆಡಳಿತ ನಿರ್ವಹಣೆಗಾಗಿ ಮೊದಲನೇ ಕಂತಿನ ಅನುದಾನವಾಗಿ **ಲೆಕ್ಕ ಶೀರ್ಷಿಕೆ 3425–60–200–0–01 (101)(ಯೋ) ಇದರಡಿಯಲ್ಲಿ ಒಟ್ಟಾರೆ ರೂ. 55.00 ಲಕ್ಷ (ಐವತ್ತೈದು ಲಕ್ಷಗಳು ಮಾತ್ರ)** ಗಳನ್ನು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ಮಂಜೂರು ಮಾಡಿದೆ.

ರೂ. ಲಕ್ಷಗಳಲ್ಲಿ

| | | |
|---|---|---|
| 1 | ಸದಸ್ಯ–ಕಾರ್ಯದರ್ಶಿ, ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿ | 12.50 |
| 2 | ನಿರ್ದೇಶಕರು, ಜವಹರಲಾಲ್ ನೆಹರು ತಾರಾಲಯ | 15.00 |
| 3 | ಗೌರವ ಕಾರ್ಯದರ್ಶಿ, ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿ | 14.00 |
| 4 | ಗೌರವ ಕಾರ್ಯದರ್ಶಿ, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು | 13.50 |
| | **ಒಟ್ಟು** | **55.00** |

1) ಈ ಹಣವನ್ನು 2011–12ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 3425–60–200–0–01 (101)(ಯೋ) ವೈಜ್ಞಾನಿಕ ಸಂಸ್ಥೆಗಳಿಗೆ ಸಹಾಯಾನುದಾನ ಇದರಡಿಯಲ್ಲಿ ಭರಿಸತಕ್ಕದ್ದು.

2) ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಮೇಲಿನ 4 ಸಂಸ್ಥೆಗಳು ಸ್ವೀಕೃತ ರಶೀದಿಯಲ್ಲಿ ಹಣವನ್ನು ಸರ್ಕಾರದ ಅಧೀನ ಕಾರ್ಯದರ್ಶಿಯವರ ಮೇಲು ರುಜುವಿನೊಂದಿಗೆ ಹಣ ಸೆಳೆಯಬಹುದು.

3) ಬಿಡುಗಡೆ ಮಾಡಿರುವ ಅನುದಾನವನ್ನು ಖರ್ಚು ಮಾಡಿದ ಬಗ್ಗೆ ಉಪಯೋಗತಾ ಪ್ರಮಾಣ ಪತ್ರ ಹಾಗೂ ಆಡಿಟ್ ಆದ ಲೆಕ್ಕಪತ್ರಗಳನ್ನು ಕೂಡಲೇ ಸಲ್ಲಿಸತಕ್ಕದ್ದು.

4) ಬಿಡುಗಡೆ ಮಾಡಿದ ಹಣವನ್ನು ಉದ್ದೇಶಿತ ಕಾರ್ಯಕ್ರಮಕ್ಕೆ ಮಾತ್ರ ಉಪಯೋಗಿಸತಕ್ಕದ್ದು, ಹಾಗೂ ಈ ಹಣವನ್ನು ಬೇರೆ ಯೋಜನೆಗೆ/ಕಾರ್ಯಕ್ರಮಗಳಿಗೆ ಸರ್ಕಾರದ ಅನುಮತಿ ಇಲ್ಲದೆ ವರ್ಗಾಯಿಸಬಾರದು.
5) ಉದ್ದೇಶಿತ ಕಾರ್ಯಕ್ರಮಕ್ಕೆ ಖರ್ಚಾಗದ ಬಾಬ್ತು ಅನುದಾನವನ್ನು ಉಳಿಸಿಕೊಂಡು ಅದನ್ನು ಸರ್ಕಾರದ ಗಮನಕ್ಕೆ ತರದೇ ಇದ್ದದ್ದು ಕಂಡುಬಂದಲ್ಲಿ ಸದರಿ ಮೊತ್ತಕ್ಕೆ ಸರಳ ಬಡ್ಡಿಯೊಂದಿಗೆ ಸರ್ಕಾರಕ್ಕೆ ಪಾವತಿಸಿಕೊಳ್ಳಲು ಕ್ರಮಕೈಗೊಳ್ಳಲಾಗುವುದು.
6) ಅನುದಾನವನ್ನು ಬಳಸದೇ ಬ್ಯಾಂಕಿನಲ್ಲಿ ಠೇವಣಿ ಮಾಡಿದ ಪಕ್ಷದಲ್ಲಿ ಅದನ್ನು ಸರ್ಕಾರದ ಗಮನಕ್ಕೆ ತರತಕ್ಕದ್ದು ಉಕ್ತವಾದಲ್ಲಿ ಅಂತಹ ಠೇವಣಿ ಮೊತ್ತಕ್ಕೆ ದೊರೆಯುವ ಬಡ್ಡಿಯೊಂದಿಗೆ ಹಿಂದಕ್ಕೆ ಪಡೆಯಲು ಕ್ರಮ ತೆಗೆದುಕೊಳ್ಳಲಾಗುವುದು.
7) ಉದ್ದೇಶಿತ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಲಾದಂತಹ ಅನುದಾನದ ಲೆಕ್ಕಪತ್ರಗಳನ್ನು ಮಂಜೂರು ಮಾಡುವ ಅಧಿಕಾರಿಯು ಸಮೀಕ್ಷೆಗಾಗಿ ಕೋರಿದ್ದಲ್ಲಿ ತಪ್ಪದೇ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಆಇ 1 ಟಿಎಫ್‌ಪಿ 2008, ದಿನಾಂಕ 16–05–2008 ರಡಿ ಇಲಾಖಾ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಪ್ರದತ್ತವಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಬೋರಲಿಂಗಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಪಿ.ಆರ್. 1152

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಪ್ರಮುಖ ಯೋಜನೆ/ಕಾರ್ಯಕ್ರಮಗಳಿಗೆ ವಾರ್ಷಿಕ ಯೋಜನಾ ಆಯವ್ಯಯದಲ್ಲಿ ಒದಗಿಸಿರುವ ಮೊತ್ತದಲ್ಲಿ ಪಂಚವಾರ್ಷಿಕ ಯೋಜನೆಯ ಹಂಚಿಕೆಯಲ್ಲಿ ಶೇಕಡ 1 ರಷ್ಟನ್ನು ಮೌಲ್ಯಮಾಪನ ಅಧ್ಯಯನಗಳಿಗೆ ಮೀಸಲಾಗಿಡುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ: ಐಎಫ್‌ಎಸ್ 42 ಇವಿಎಫ್ (1) 99, ದಿನಾಂಕ 17–11–2000ದ ಆದೇಶವನ್ನು ಓದಲಾಗಿದೆ.

**ಪ್ರಸ್ತಾವನೆ :**

ದಿನಾಂಕ 29 ನವೆಂಬರ್ 99 ರಂದು ನಡೆದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳ ಪರಿಶೀಲನಾ ಸಭೆಯಲ್ಲಿ ಕೆಳಗೆ ಕಾಣಿಸಿದ ನಿರ್ಣಯವನ್ನು ತೆಗೆದುಕೊಳ್ಳಲಾಯಿತು.

ಯೋಜನಾ ಕಾರ್ಯಕ್ರಮಗಳ ಸಾಧನೆಗಳನ್ನು ಮಾದರಿ ಸಮೀಕ್ಷೆಯ ಮೂಲಕ ಭೌತಿಕವಾಗಿ ಪರಿವೀಕ್ಷಿಸುವ ಈಗಿರುವ ಪದ್ಧತಿಯ ಜೊತೆಗೆ ಪ್ರತಿಯೊಂದು ಪ್ರಮುಖ ಯೋಜನೆ/ಕಾರ್ಯಕ್ರಮ/ಪರಿಯೋಜನೆಗೆ ವಾರ್ಷಿಕ ಯೋಜನೆಯಡಿ ಒದಗಿಸುವ ಮೊತ್ತದಲ್ಲಿ ½ ರಷ್ಟನ್ನು ತ್ವರಿತ ಮೌಲ್ಯಮಾಪನ ಅಧ್ಯಯನಗಳನ್ನು ಕೈಗೊಳ್ಳಲು ಮೀಸಲಾಗಿಡುವ ಮತ್ತು ಸಂಬಂಧಿಸಿದ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿನ ಸಮಿತಿಯು ಮೌಲ್ಯಮಾಪನ ಅಧ್ಯಯನಗಳನ್ನು ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯವು ಒಳಗೊಂಡಂತೆ ಬಾಹ್ಯ ಸಂಸ್ಥೆಗಳಿಗೆ ವಹಿಸಿಕೊಡುವ ಸಲಹೆಯನ್ನು ಯೋಜನಾ ಇಲಾಖೆಯು ಪರಿಶೀಲಿಸುವುದು.

ಈ ಸಲಹೆಯನ್ನು ಯೋಜನಾ ಇಲಾಖೆಯ ಪರೀಕ್ಷಿಸಿದ ನಂತರ ರೂಪಿಸಿದ ಪ್ರಸ್ತಾವನೆಗಳನ್ನು ದಿನಾಂಕ 30 ಮೇ 2000 ಮತ್ತು ದಿನಾಂಕ 30 ಜೂನ್ 2000 ರಂದು ನಡೆದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳ ಪರಿಶೀಲನಾ ಸಭೆಗಳಲ್ಲಿ ಚರ್ಚಿಸಲಾಯಿತು. ಚರ್ಚೆಯ ನಂತರ ರೂ. 100 ಲಕ್ಷ ಅಥವಾ ಹೆಚ್ಚಿನ ಪಂಚವಾರ್ಷಿಕ ಯೋಜನೆಯ ಹಂಚಿಕೆ ಇರುವ ಎಲ್ಲಾ ಯೋಜನಾ ಕಾರ್ಯಕ್ರಮಗಳನ್ನು ಪಂಚವಾರ್ಷಿಕ ಯೋಜನೆಯ ಅವಧಿ ಮುಗಿಯುವ ಮೊದಲೇ ಮೌಲ್ಯಮಾಪನ ಮಾಡಬೇಕೆಂದು ಮತ್ತು ಮೌಲ್ಯಮಾಪನ ಅಧ್ಯಯನಗಳ ಶಿಫಾರಸ್ಸುಗಳ ಅನುಷ್ಠಾನದ ಮಾನಿಟರಿಂಗ್‌ಗಾಗಿ ಕಾರ್ಯಕ್ರಮಗಳ ಪಂಚವಾರ್ಷಿಕ ಯೋಜನೆಯ ಹಂಚಿಕೆಯ ಶೇ 1 ರಷ್ಟನ್ನು ರೂ. 1 ಲಕ್ಷ ಕನಿಷ್ಠ ಮತ್ತು ಗರಿಷ್ಠ ರೂ. 5 ಲಕ್ಷಗಳಿಗೆ ಒಳಪಟ್ಟು ಮೂರು ವರ್ಷಗಳ ಅನುಷ್ಠಾನದ ನಂತರ ವಾರ್ಷಿಕ ಯೋಜನಾ ಆಯವ್ಯಯದಲ್ಲಿ ಮೀಸಲಾಗಿಡಬೇಕು ಹಾಗೂ ಇದರ ಪುನರ್ವಿನಿಯೋಗಕ್ಕೆ ಅನುಮತಿ ನೀಡದಿರಲು ತೀರ್ಮಾನಿಸಲಾಯಿತು. ಈ ನಿರ್ಧಾರಗಳ ಅನುಸಾರ ಮೌಲ್ಯಮಾಪನ ಅಧ್ಯಯನಗಳನ್ನು ನಡೆಸುವ ವಿಧಿ ವಿಧಾನಗಳನ್ನೊಳಗೊಂಡ ಸರ್ಕಾರದ ಆದೇಶವನ್ನು ಹೊರಡಿಸುವಂತೆ ಯೋಜನಾ ಇಲಾಖೆಗೆ ಸೂಚಿಸಲಾಯಿತು. ಅದರಂತೆ ಯೋಜನಾ ಇಲಾಖೆಯು ಹೊರಡಿಸಿರುವ ಸರ್ಕಾರ ಆದೇಶವನ್ನು ಮೇಲೆ–(1)ರಲ್ಲಿ ಓದಲಾಗಿದ್ದು ಅದರಂತೆ ಆ ಆದೇಶದ ಮೇರೆಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳನ್ನು ಮೌಲ್ಯಮಾಪನ ಮಾಡಲು ಕೆಳಗೆ ಸೂಚಿಸಿರುವಂತೆ ಸಮಿತಿಯ ಪ್ರಕಾರ್ಯಗಳನ್ನೊಳಗೊಂಡಂತೆ ಇಲಾಖಾ ಮೌಲ್ಯಮಾಪನ ಸಮಿತಿ (Departmental Evaluation Committee) ಯನ್ನು ರಚಿಸಲು ಕೋರಿರುತ್ತಾರೆ.

ಇಲಾಖಾ ಮೌಲ್ಯಮಾಪನ ಸಮಿತಿ:–

| | | |
|---|---|---|
| 1. ಇಲಾಖೆಯ ಅಪರ ಮುಖ್ಯಕಾರ್ಯದರ್ಶಿಗಳು/ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು | ... | ಅಧ್ಯಕ್ಷರು |
| 2. ಅನುಷ್ಠಾನಗೊಳಿಸುತ್ತಿರುವ ಇಲಾಖೆಯ ಮುಖ್ಯಸ್ಥರು | ... | ಸದಸ್ಯರು |
| 3. ಹಿರಿಯ ನಿರ್ದೇಶಕರು, ಮೌಲ್ಯಮಾಪನ ವಿಭಾಗ, ಯೋಜನಾ ಇಲಾಖೆ | ... | ಸದಸ್ಯರು |
| 4. ಆಂತರಿಕ ಆರ್ಥಿಕ ಸಲಹೆಗಾರರು | ... | ಸದಸ್ಯರು |
| 5. ಮಾಹಿತಿ ತಂತ್ರಜ್ಞಾನ ಇಲಾಖೆಯ ಪ್ರತಿನಿಧಿ | ... | ಸದಸ್ಯರು |
| 6. ಸಂಬಂಧಪಟ್ಟ ಇಲಾಖೆಯಲ್ಲಿ ಯೋಜನೆ ಮತ್ತು ಮಾನಿಟರಿಂಗ್ ಕಾರ್ಯನಿರ್ವಹಿಸುತ್ತಿರುವ ಉಪಕಾರ್ಯದರ್ಶಿಗಳು | ... | ಸದಸ್ಯರು |
| 7. ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುತ್ತಿರುವ ಕಾರ್ಯಕ್ರಮಾಧಿಕಾರಿಗಳು | ... | ಸದಸ್ಯರು |
| 8. ಜನಸಂಖ್ಯಾ ಮತ್ತು ಮೌಲ್ಯಮಾಪನ ವಿಭಾಗದ ಮುಖ್ಯಸ್ಥರು | ... | ಸದಸ್ಯ ಕಾರ್ಯದರ್ಶಿಗಳು |

**ಸರ್ಕಾರದ ಆದೇಶ ಸಂಖ್ಯೆ : ಆಕುಕ 61 ಸಿಜಿಎಂ 2010, ಬೆಂಗಳೂರು, ದಿನಾಂಕ : 11–04–2011**

ಪ್ರಸ್ತಾವನೆಯಲ್ಲಿ ಸೂಚಿಸಿರುವ ಹಾಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಅನುಷ್ಠಾನಗೊಳ್ಳುತ್ತಿರುವ ಕಾರ್ಯಕ್ರಮಗಳ ಮೌಲ್ಯಮಾಪನಕ್ಕಾಗಿ ಕೆಳಗೆ ಸೂಚಿಸಿರುವಂತೆ ಇಲಾಖಾ ಮೌಲ್ಯಮಾಪನ ಸಮಿತಿ (Departmental Evaluation Committee) ಯನ್ನು ರಚಿಸಲಾಗಿದೆ.

**ಇಲಾಖಾ ಮೌಲ್ಯಮಾಪನ ಸಮಿತಿ:–**

1. ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ... ಅಧ್ಯಕ್ಷರು
2. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ... ಸದಸ್ಯರು
3. ಅಭಿಯಾನ ನಿರ್ದೇಶಕರು, ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ ... ಸದಸ್ಯರು
4. ಯೋಜನಾ ನಿರ್ದೇಶಕರು, ಕರ್ನಾಟಕ ಆರೋಗ್ಯ ಪದ್ಧತಿ ಮತ್ತು ಅಭಿವೃದ್ಧಿ ಸುಧಾರಣೆ ಯೋಜನೆ ... ಸದಸ್ಯರು
5. ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ... ಸದಸ್ಯರು
6. ವಿಶೇಷಾಧಿಕಾರಿ, ಮೌಲ್ಯಮಾಪನ ವಿಭಾಗ, ಯೋಜನಾ ಇಲಾಖೆ ... ಸದಸ್ಯರು
7. ಸರ್ಕಾರದ ಜಂಟಿ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ... ಸದಸ್ಯರು
8. ಆಂತರಿಕ ಆರ್ಥಿಕ ಸಲಹೆಗಾರರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ... ಸದಸ್ಯರು
9. ಸರ್ಕಾರದ ಉಪ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ... ಸದಸ್ಯರು
10. ಮಾಹಿತಿ ತಂತ್ರಜ್ಞಾನ ಇಲಾಖೆಯ ಪ್ರತಿನಿಧಿ ... ಸದಸ್ಯರು
11. ನಿರ್ದೇಶಕರು, ಮೌಲ್ಯಮಾಪನ ವಿಭಾಗ, ಯೋಜನಾ ಇಲಾಖೆ ... ಸದಸ್ಯರು
12. ರಾಜ್ಯ ಜನಸಂಖ್ಯಾ ತಜ್ಞರು, ಜನಸಂಖ್ಯೆ ಮತ್ತು ಮೌಲ್ಯಮಾಪನ ವಿಭಾಗ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಆನಂದರಾವ್ ವೃತ್ತ, ಬೆಂಗಳೂರು ... ಸದಸ್ಯ ಕಾರ್ಯದರ್ಶಿ

ಸಮಿತಿಯ ಪ್ರಕಾರ್ಯಗಳು ಕೆಳಗಿನಂತಿವೆ:–

1. ಮೌಲ್ಯಮಾಪನಕ್ಕೆ ಒಳಪಡಿಸಬೇಕಾದ ಯೋಜನೆ/ಕಾರ್ಯಕ್ರಮಗಳ ಬಗ್ಗೆ ನಿರ್ಧರಿಸುವುದು
2. ಮೌಲ್ಯಮಾಪನವನ್ನು ಹೊರಗಿನ ಸಂಸ್ಥೆಗಳಿಗೆ ವಹಿಸುವುದು
3. ಮೌಲ್ಯಮಾಪನ ಸಂಸ್ಥೆಗಳು ತಯಾರಿಸಿದ ಮೌಲ್ಯಮಾಪನ ವರದಿಗಳನ್ನು ಪರಿಶೀಲಿಸಿ ಅಂತಿಮಗೊಳಿಸುವುದು
4. ಮೌಲ್ಯಮಾಪನ ಅಧ್ಯಯನದಲ್ಲಿನ ಶಿಫಾರಸ್ಸುಗಳನ್ನು ಅಂತಿಮಗೊಳಿಸುವುದು ಹಾಗೂ ಶಿಫಾರಸ್ಸುಗಳ ಮೇಲಿನ ಅನುವರ್ತನಾ ಕ್ರಮಗಳನ್ನು ಸೂಚಿಸುವುದು.
5. ಮೇಲಿನ 4 ರಲ್ಲಿ ಅಂತಿಮಗೊಳಿಸಿದ ಅನುವರ್ತನಾ ಕ್ರಮಗಳ ಅನುಷ್ಠಾನದ ಪರಿಶೀಲನೆ

ಇನ್ನು ಮುಂದೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಹಾಗೂ ಅದರಡಿಯಲ್ಲಿ ಬರುವ ಅಂಗ ಸಂಸ್ಥೆಗಳಲ್ಲಿ ಯೋಜನಾ ಕಾರ್ಯಕ್ರಮಗಳ ಮೌಲ್ಯಮಾಪನವನ್ನು ತೆಗೆದುಕೊಳ್ಳಬೇಕಾದಲ್ಲಿ ಮೌಲ್ಯಮಾಪನದ ವಿವರಗಳನ್ನು ಮೇಲೆ ಸೂಚಿಸಿರುವ ಸಮಿತಿಗೆ ಸಲ್ಲಿಸಬೇಕೆಂದು ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಕೆ. ಪಿ. ಚಂದ್ರಹಾಸ)**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

ಪಿ.ಆರ್. 1153

## ವಸತಿ ಸಚಿವಾಲಯ

### ತಿದ್ದುಪಡಿ

ಸಂ.ವಇ/16/ಹೆಚ್‌ಎಹೆಚ್/2010(ಪಿ1), ಬೆಂಗಳೂರು, ದಿನಾಂಕ 05–04–2011

**ವಿಷಯ** : ನೆರೆಹಾವಳಿ ಸಂತ್ರಸ್ಥರಿಗೆ ಪುನರ್ವಸತಿ ಕಲ್ಪಿಸುವ ಬಗ್ಗೆ.

ಸರ್ಕಾರದ ಆದೇಶ ಸಂಖ್ಯೆ: ವಇ 16 ಹೆಚ್‌ಎಹೆಚ್ 2010 (ಪಿ1), ದಿನಾಂಕ 11ನೇ ಮಾರ್ಚ್ 2011ರಲ್ಲಿನ ಆದೇಶದ ಭಾಗದ ಪ್ರಾರಂಭದಲ್ಲಿನ "ಕರ್ನಾಟಕ ಗ್ರಾಮೀಣ ಮೂಲಭೂತ ಸೌಕರ್ಯ ಅಭಿವೃದ್ಧಿ ಸಂಸ್ಥೆಗೆ" ಎಂಬುದಕ್ಕೆ ಬದಲಾಗಿ "ಕ್ರೆಡೈ ಸಂಸ್ಥೆಗೆ" ಎಂದು ಹಾಗೂ ಬಾಗಲಕೋಟೆ ಜಿಲ್ಲೆಯ "ಚೋಳಗುಡ್ಡ" ಎಂಬುದಕ್ಕೆ ಬದಲಾಗಿ "ಚೊಳಚಗುಡ್ಡ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

**(ಕೆ. ಆರ್. ವಲ್ಲೂರ)**

ಪೀಠಾಧಿಕಾರಿ–2, ವಸತಿ ಇಲಾಖೆ

ಪಿ.ಆರ್. ನಂ. 1154

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಶ್ರೀ ಧನಲಕ್ಷ್ಮಿ ಸಹಕಾರಿ ಸಕ್ಕರೆ ಕಾರ್ಖಾನೆಯ ಗುತ್ತಿಗೆದಾರರ ಕಂಪನಿಯ ಹೆಸರನ್ನು ಬದಲಾಯಿಸುವ ಬಗ್ಗೆ.

**ಓದಲಾಗಿದೆ :**
1) ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಇವರ ಪತ್ರ ಸಂಖ್ಯೆ ಡಿಎಸ್‌ಕೆ ಎಫ್‌ಐಎನ್/05/2010–11, ದಿನಾಂಕ 22–02–2011.
2) ಸರ್ಕಾರದ ಪತ್ರ ಸಂಖ್ಯೆ ವಾಕೈ 49 ಸಸಕಾ 2010, ದಿನಾಂಕ 5–3–2011
3) ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಇವರ ಪತ್ರ ಸಂಖ್ಯೆ ಡಿಎಸ್‌ಕೆ/ಎಫ್‌ಐಎಸ್/05/2010–11, ದಿನಾಂಕ 14–3–2011

**ಪ್ರಸ್ತಾವನೆ :**

ಶ್ರೀ ಧನಲಕ್ಷ್ಮಿ ಸಹಕಾರಿ ಸಕ್ಕರೆ ಕಾರ್ಖಾನೆಯನ್ನು 2007–08ನೇ ಸಾಲಿನಿಂದ 2031–32 ಸಾಲಿನವರೆಗೆ 25 ವರ್ಷಗಳ ಅವಧಿಗೆ BOOT ಆಧಾರದಲ್ಲಿ ಗುತ್ತಿಗೆಗೆ ಪಡೆದಿರುವ ಮೆ॥ ಜಿಎಂಆರ್ ಇಂಡಸ್ಟ್ರೀಸ್ ಲಿ., ಹೈದರಾಬಾದ್, ಇವರು ಸದರಿ ಸಹಕಾರಿ ಸಕ್ಕರೆ ಕಾರ್ಖಾನೆಯಲ್ಲಿನ ಷೇರುಗಳನ್ನು ಕಂಪನಿ ಕಾಯ್ದೆಗಳನುಗುಣವಾಗಿ ಮೆ॥ ಪ್ಯಾರೀಸ್ ಶುಗರ್ ಇಂಡಸ್ಟ್ರೀಸ್ ಲಿಮಿಟೆಡ್ ಇವರಿಗೆ ಬದಲಾಯಿಸಿದ ಹಿನ್ನೆಲೆಯಲ್ಲಿ ಗುತ್ತಿಗೆ ಕರಾರು ಪತ್ರದಲ್ಲಿನ ಎಲ್ಲಾ ಷರತ್ತುಗಳಿಗೆ ಮೆ॥ ಪ್ಯಾರೀಸ್ ಶುಗರ್ ಇಂಡಸ್ಟ್ರೀಸ್ ಲಿಮಿಟೆಡ್‌ರವರು ಬದ್ಧರಾಗಿರತಕ್ಕದ್ದು ಎಂಬ ಷರತ್ತನ್ನು ವಿಧಿಸಿ ಗುತ್ತಿಗೆದಾರ ಕಂಪನಿಯ ಮೆ॥ ಜಿಎಂಆರ್ ಇಂಡಸ್ಟ್ರೀಸ್ ಲಿಮಿಟೆಡ್ ಹೆಸರನ್ನು ಮೆ॥ ಪ್ಯಾರಿಸ್ ಶುಗರ್ ಇಂಡಸ್ಟ್ರೀಸ್ ಲಿಮಿಟೆಡ್ ಎಂಬುದಾಗಿ ಬದಲಾಯಿಸಿಕೊಂಡಿರುವ ಕ್ರಮಕ್ಕೆ ಸರ್ಕಾರವು ಅನುಮೋದನೆ ನೀಡುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದ ಮೂಲಕ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾನೆಯನ್ನು ಸಲ್ಲಿಸಿದ್ದರು.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸುವ ಸಲುವಾಗಿ ಕೆಲವೊಂದು ಅಗತ್ಯ ದಾಖಲಾತಿಗಳನ್ನು ಕಳುಹಿಸಿಕೊಡುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರನ್ನು ಕೋರಲಾಗಿತ್ತು.

ಓದಲಾದ ಕ್ರಮ ಸಂಖ್ಯೆ (2)ರ ಪತ್ರಕ್ಕೆ ಅನುಸರಣೆಯನ್ನು ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದ ಮೂಲಕ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಾಕೈ 49 ಸಸಕಾ 2010, ಬೆಂಗಳೂರು, ದಿನಾಂಕ : 12–04–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ ಶ್ರೀ ಧನಲಕ್ಷ್ಮಿ ಸಹಕಾರಿ ಸಕ್ಕರೆ ಕಾರ್ಖಾನೆಯ ಗುತ್ತಿಗೆದಾರ ಕಂಪನಿಯ ಹೆಸರು ಬದಲಾವಣೆಗೆ ಸಂಬಂಧಿಸಿದಂತೆ ಗೌರವಾನ್ವಿತ ಉಚ್ಛ ನ್ಯಾಯಾಲಯದ ಮುಂದೆ ದಾಖಲಾಗಿರುವ ರಿಟ್ ಅರ್ಜಿ ಸಂಖ್ಯೆ 2411/2008 ಮತ್ತು 63926/2010ರ ಪ್ರಕರಣಗಳಲ್ಲಿ ಮೆ॥ ಜಿಎಂಆರ್ ಇಂಡಸ್ಟ್ರೀಸ್ ಲಿಮಿಟೆಡ್ ಸಂಸ್ಥೆಯು ಸೂಕ್ತ ಅರ್ಜಿಯನ್ನು ಸಲ್ಲಿಸಿ ತನ್ನ ಹೆಸರನ್ನು ಮೆ॥ ಪ್ಯಾರೀಸ್ ಶುಗರ್ ಇಂಡಸ್ಟ್ರೀಸ್ ಲಿಮಿಟೆಡ್ ಎಂದು ಕಾನೂನು ಕ್ರಮಕ್ಕನುಸರಿಸಿ ಬದಲಾವಣೆ ಮಾಡಿಕೊಳ್ಳಲಾಗಿದೆಯೆಂದು ಅರಿಕೆ ಮಾಡಿಕೊಂಡು ಸೂಕ್ತ ತಿದ್ದುಪಡಿಗೆ ಸದರಿ ಕಂಪನಿಯು ಕೋರಿಕೆ ಸಲ್ಲಿಸುವ ಷರತ್ತಿಗೊಳಪಟ್ಟು ಹಾಗೂ ಸದರಿ ರಿಟ್ ಅರ್ಜಿ ಪ್ರಕರಣಗಳಲ್ಲಿ ಗೌರವಾನ್ವಿತ ಉಚ್ಛ ನ್ಯಾಯಾಲಯವು ನೀಡುವ ಅಂತಿಮ ತೀರ್ಪಿಗೆ ಒಳಪಟ್ಟು ಶ್ರೀ ಧನಲಕ್ಷ್ಮಿ ಸಹಕಾರಿ ಸಕ್ಕರೆ ಕಾರ್ಖಾನೆಯ ಗುತ್ತಿಗೆದಾರ ಕಂಪನಿಯಾದ ಮೆ॥ ಜಿಎಂಆರ್ ಇಂಡಸ್ಟ್ರೀಸ್ ಲಿಮಿಟೆಡ್ ಹೆಸರನ್ನು ಮೆ॥ ಪ್ಯಾರಿಸ್ ಶುಗರ್ ಇಂಡಸ್ಟ್ರೀಸ್ ಲಿಮಿಟೆಡ್ ಎಂಬುದಾಗಿ ಬದಲಾಯಿಸಿಕೊಂಡಿರುವ ಕ್ರಮವನ್ನು ಘಟನೋತ್ತರವಾಗಿ ಅನುಮೋದಿಸಲಾಗಿದೆ.

ಈ ಆದೇಶವನ್ನು ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯು ದಿನಾಂಕ 29–3–2011ರಂದು ನೀಡಿರುವ ಅನಧಿಕೃತ ಟಿಪ್ಪಣಿ ಸಂಖ್ಯೆ LAW 127 OPN 2011 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**(ಬಿ. ರಾಮಸ್ವಾಮಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸಹಕಾರಿ ಸಕ್ಕರೆ)

ಪಿ.ಆರ್. 1155

## ಸಹಕಾರ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ರೆಡ್ಡಿ ಜನಸಂಘ, ಕೋರಮಂಗಲ, ಬೆಂಗಳೂರು ಈ ಸಂಸ್ಥೆಗೆ ಆಡಳಿತಾಧಿಕಾರಿಗಳನ್ನು ನೇಮಕ ಮಾಡುವ ಬಗ್ಗೆ

**ಓದಲಾಗಿದೆ :**
1) ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರ ಪತ್ರ ಸಂಖ್ಯೆ: ಡಿಆರ್/ಎಸ್‌ಒಆರ್/ಪಿಟಿಎನ್/37/2010–11, ದಿನಾಂಕ 1–2–2011.
2) ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ: ಸಇ 02 ಸಸಂನೋ 2011, ದಿನಾಂಕ 19–2–2011.
3) ಪ್ರಧಾನ ಕಾರ್ಯದರ್ಶಿ, ಕರ್ನಾಟಕ ರಾಜ್ಯ ರೆಡ್ಡಿ ಜನಸಂಘ, ಕೋರಮಂಗಲ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಲಿಖಿತ ಹೇಳಿಕೆ ದಿನಾಂಕ 7–3–2011.
4) ಸರ್ಕಾರದ ಪತ್ರ ಸಂಖ್ಯೆ: ಸಇ 02 ಸಸಂನೋ 2011, ದಿನಾಂಕ 19–3–2011
5) ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಆರ್/ಎಸ್‌ಒಆರ್/ಪಿಟಿಎನ್/37/2010–11, ದಿನಾಂಕ 5–4–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ 1–2–2011ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ, ಬೆಂಗಳೂರು ರವರು ಕರ್ನಾಟಕ ರಾಜ್ಯ ರೆಡ್ಡಿ ಜನ ಸಂಘ, ಬೆಂಗಳೂರು ಈ ಸಂಘವು ನೋಂದಣಿ ಸಂಖ್ಯೆ: 122/24–25 ರಂತೆ ನೋಂದಣಿ ಆಗಿದ್ದು, ಇದರ

ಹಾಲಿ ಇರುವ ಕಾರ್ಯಕಾರಿ ಸಮಿತಿ ಅವಧಿಯು ನವೆಂಬರ್ 2010ರ ಅಂತ್ಯಕ್ಕೆ ಮುಗಿದಿದ್ದು, ಸರ್ವ ಸದಸ್ಯರ ಸಭೆ ನಡೆಸಲು ಹಾಗೂ ಅವಧಿ ಮುಗಿದ ಕಾರ್ಯಕಾರಿ ಸಮಿತಿಗೆ ಚುನಾವಣೆ ನಡೆಸದೇ ನಿಯಮಬಾಹಿರವಾಗಿ ಅಧಿಕಾರದಲ್ಲಿ ಮುಂದುವರೆದಿರುತ್ತಾರೆ ಎಂದು ಶ್ರೀ ಎನ್. ಸುಧಾಕರ್, ಶ್ರೀ ಕೃಷ್ಣರೆಡ್ಡಿ ಮತ್ತು ಇತರರು ಆರೋಪಿಸಿ ಮೇಲಿಂದ ಮೇಲೆ ದೂರು ಸಲ್ಲಿಸಿದ್ದು, ಸದರಿ ದೂರುಗಳ ಬಗ್ಗೆ ಪರಿಶೀಲಿಸಿ, ಅರ್ಜಿದಾರರಿಗೆ ಹಿಂಬರಹ ನೀಡಿ, ಸಹಕಾರ ಸಂಘಗಳ ನಿಬಂಧಕರ ಕಛೇರಿಗೆ ವಿವರಣೆ ಸಲ್ಲಿಸುವಂತೆ ಕನಾಟಕ ರಾಜ್ಯ ರೆಡ್ಡಿ ಜನ ಸಂಘಕ್ಕೆ ದಿನಾಂಕ 9–11–2010 ಮತ್ತು 16–12–2010 ಗಳಂದು ಪತ್ರ ಬರೆಯಲಾಗಿರುತ್ತದೆ.

ಕನಾಟಕ ರಾಜ್ಯ ರೆಡ್ಡಿ ಜನ ಸಂಘ, ಬೆಂಗಳೂರು ಇವರು ಸಹಕಾರ ಸಂಘಗಳ ನಿಬಂಧಕರ ಕಛೇರಿಗೆ ದಿನಾಂಕ 29–12–2010ರಂದು ಪತ್ರ ಬರೆದು, ವಿವರಣೆ ನೀಡಿದ್ದು, ಸಂಘದ ಬೈಲಾ ತಿದ್ದುಪಡಿಗೆ ಕ್ರಮವಿಡುತ್ತಿರುವುದರಿಂದ ಹಾಗೂ ವೈದ್ಯಕೀಯ ಮಹಾವಿದ್ಯಾಲಯ ಕಟ್ಟಡ ಕಟ್ಟಲು ಸಂಘದ ಸಮಿತಿ ವತಿಯಿಂದ ಕಾರ್ಯಕ್ರಮಗಳನ್ನು ರೂಪಿಸಲಾಗುತ್ತಿದ್ದು, ಈ ಹಿನ್ನೆಲೆಯಲ್ಲಿ, ಸಂಘದ ಸರ್ವ ಸದಸ್ಯರ ಸಭೆಯಲ್ಲಿ ಚುನಾವಣೆ ನಡೆಸಲು ಬೈಲಾ ರೀತ್ಯ ಅವಕಾಶ ಇರುತ್ತದೆ. ಈ ಹಿನ್ನಲೆಯಲ್ಲಿ ಸರ್ವಸದಸ್ಯರ ಸಭೆ ಸಡೆಸಲು 6 ತಿಂಗಳ ಕಾಲಾವಕಾಶ ಕೋರಿರುತ್ತಾರೆ.

**ಸಂಸ್ಥೆಯ ಕುರಿತು ಈ ಕೆಳಗಿನ ಅಂಶಗಳನ್ನು ಸಲ್ಲಿಸಲಾಗಿದೆ:**

1) ದಿನಾಂಕ 26–10–2008 ರಂದು ನಡೆದ ಸರ್ವಸದಸ್ಯರ ಸಭೆಯಲ್ಲಿ ಬೈಲಾ ಸಂಖ್ಯೆ 12 (ಎ)ರಂತೆ ಎರಡು ವರ್ಷಗಳ ಅವಧಿಗೆ ಕಾರ್ಯಕಾರಿ ಸಮಿತಿ ಆಯ್ಕೆಯಾಗಿದ್ದು, ಸದರಿ ಅವಧಿಯು 2010 ನವೆಂಬರ್‌ಗೆ ಮುಕ್ತಾಯವಾಗಿದ್ದು, 2010 ನವೆಂಬರ್ ಅಂತ್ಯದೊಳಗೆ ಕಾರ್ಯಕಾರಿ ಸಮಿತಿ ಚುನಾವಣೆ ನಡೆಸಬೇಕಾಗಿರುತ್ತದೆ.
2) ದಿನಾಂಕ 20–2–2010ರಂದು ನಡೆದ ಸರ್ವಸದಸ್ಯರ ಸಭೆಯಲ್ಲಿ ಕಲಂ 11(2)ರಂತೆ ಹಣಕಾಸು ವರ್ಷದ ಅವಧಿ ಮುಗಿದ 9 ತಿಂಗಳ ಒಳಗಾಗಿ ಸರ್ವಸದಸ್ಯರ ಸಭೆ ನಡೆಸಬೇಕು ಎಂಬುದಾಗಿ ಇರುತ್ತದೆ. ಅದರಂತೆ ಸಂಘವು ಡಿಸೆಂಬರ್ 2010ರೊಳಗಾಗಿ ಸರ್ವ ಸದಸ್ಯರ ಸಭೆ ನಡೆಸಬೇಕಾಗಿರುತ್ತದೆ.
3) ಈಗಾಗಲೇ ರೆಡ್ಡಿ ಜನ ಸಂಘ ಇದರ ಗವರ್ನಿಂಗ್ ಬಾಡಿ ಅವಧಿ 2010ರ ನವೆಂಬರ್ ಅಂತ್ಯಕ್ಕೆ ಮುಗಿದಿರುವುದರಿಂದ ಕಲಂ 27(ಎ)(ಬಿ) ಪ್ರಕಾರ ಆಡಳಿತಾಧಿಕಾರಿಗಳ ನೇಮಕ ಮಾಡಬಹುದು.

ವಿಶೇಷ ಸಂದರ್ಭಗಳಲ್ಲಿ ಸಂಘಗಳ ಸರ್ವಸದಸ್ಯರ ಸಭೆಯನ್ನು ಮಾತ್ರ 6 ತಿಂಗಳು ಮುಂದೂಡಲು ಅನುಮತಿ ನೀಡುವ ಅಧಿಕಾರ ಸಂಘಗಳ ನೊಂದಣಾಧಿಕಾರಿಗಳಿಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 11(2)ರ ಪ್ರಕಾರ ಅಧಿಕಾರ ಇರುತ್ತದೆ. ಆದರೆ ಅವಧಿ ಮುಗಿದ ಕಾರ್ಯಕಾರಿ ಸಮಿತಿ ಮುಂದುವರೆಯಲು ಅಥವಾ ಕಾರ್ಯಕಾರಿ ಸಮಿತಿ ಚುನಾವಣೆ ಮುಂದೂಡಲು ಅನುಮತಿ ನೀಡುವ ಅಧಿಕಾರ ಕಾಯ್ದೆಯಲ್ಲಿ ಇರುವುದಿಲ್ಲ. ಸಂಘ ಸಂಸ್ಥೆಗಳು ಪ್ರಜಾಪ್ರಭುತ್ವ ತಳಹದಿ ಮೇಲೆ ನೋಂದಣಿಯಾಗಿ ಕಾರ್ಯನಿರ್ವಹಿಸುತ್ತಿದ್ದು, ಅವಧಿ ಮುಗಿದ ಕಾರ್ಯಕಾರಿ ಸಮಿತಿ ಮುಂದುವರೆಯಲು ಅವಕಾಶ ಇಲ್ಲದ ಕಾರಣ ಸದರಿ ಸಂಘಕ್ಕೆ ಆಡಳಿತಾಧಿಕಾರಿಯನ್ನು ಕಲಂ 27(ಎ)(ಬಿ) ರಂತೆ ನೇಮಕ ಮಾಡಬಹುದಾಗಿದೆ ಎಂಬ ಅಭಿಪ್ರಾಯದೊಂದಿಗೆ ಆಡಳಿತಾಧಿಕಾರಿಗಳ ನೇಮಕಕ್ಕೆ ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರ ಪ್ರಸ್ತಾವನೆಯ ಆಧಾರದನ್ವಯ ಮೇಲೆ ಓದಲಾದ ಕ್ರಮ ಸಂಖ್ಯೆ: (2) ಸರ್ಕಾರದ ದಿನಾಂಕ 19–2–2011ರ ಕಾರಣ ಕೇಳುವ ನೋಟೀಸನ್ನು ಸಂಸ್ಥೆಯ ಅಧ್ಯಕ್ಷರು ಮತ್ತು ಕಾರ್ಯದರ್ಶಿಯವರಿಗೆ ಜಾರಿ ಮಾಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರಲ್ಲಿ ಸಂಸ್ಥೆಯ ಪ್ರಧಾನ ಕಾರ್ಯದರ್ಶಿಗಳು ದಿನಾಂಕ 7–3–2011 ರಂದು ಲಿಖಿತ ಹೇಳಿಕೆ ಸಲ್ಲಿಸಿರುತ್ತಾರೆ. ಸದರಿ ಲಿಖಿತ ಹೇಳಿಕೆಯನ್ನು ಸಹಕಾರ ಸಂಘಗಳ ನಿಬಂಧಕರಿಗೆ ಕಳುಹಿಸಿ, ವಿಷಯದ ಬಗ್ಗೆ ನಿಯಮಾನುಸಾರ ಪರಿಶೀಲಿಸಿ, ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸುವ ಬಗ್ಗೆ ಸ್ಪಷ್ಟವಾದ ಅಭಿಪ್ರಾಯದ ವರದಿಯನ್ನು ಕಳುಹಿಸಿರುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ಸರ್ಕಾರದ ದಿನಾಂಕ 19–3–2011ರ ಪತ್ರದಲ್ಲಿ ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (5)ರ ದಿನಾಂಕ 5–4–2011ರ ಪತ್ರದಲ್ಲಿ, ಕರ್ನಾಟಕ ರಾಜ್ಯ ರೆಡ್ಡಿ ಜನಸಂಘ ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಲಿಖಿತ ವಿವರಣೆಯನ್ನು ಪರಿಶೀಲಿಸಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 11(2)ರಲ್ಲಿ ಸಂಘಗಳ ಜಿಲ್ಲಾ ನೋಂದಣಾಧಿಕಾರಿಗಳಿಗೆ ಸರ್ವ ಸದಸ್ಯರ ಸಭೆಯನ್ನು ಮಾತ್ರ ಮುಂದೂಡಲು ಅನುಮತಿ ನೀಡುವ ಅಧಿಕಾರವಿದ್ದು, ಆದರೆ ಅವಧಿ ಮುಗಿದ ಆಡಳಿತ ಮಂಡಳಿ ಚುನಾವಣೆಯನ್ನು ಮುಂದೂಡಲು ಅನುಮತಿ ನೀಡುವ ಅಧಿಕಾರ ಇರುವುದಿಲ್ಲ, ಈ ಹಿನ್ನಲೆಯಲ್ಲಿ ಕರ್ನಾಟಕ ರಾಜ್ಯ ರೆಡ್ಡಿ ಜನ ಸಂಘ, ಬೆಂಗಳೂರು ಇದಕ್ಕೆ ಆಡಳಿತಾಧಿಕಾರಿ ನೇಮಕ ಮಾಡುವ ಬಗ್ಗೆ ಅವರು ಈಗಾಗಲೇ ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ 1–2–2011ರ ಪತ್ರದಲ್ಲಿನ ಅಭಿಪ್ರಾಯವನ್ನು ಪರಿಗಣಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ರಾಜ್ಯ ರೆಡ್ಡಿ ಜನ ಸಂಘ, ಕೋರಮಂಗಲ, ಬೆಂಗಳೂರು ಈ ಸಂಘಕ್ಕೆ ಆಡಳಿತಾಧಿಕಾರಿಗಳನ್ನು ನೇಮಿಸಲು ಸಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 02 ಸಸಂನೋ 2011, ಬೆಂಗಳೂರು, ದಿನಾಂಕ : 18–04–2011**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ರೆಡ್ಡಿ ಜನ ಸಂಘ, ಕೋರಮಂಗಲ, ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ) ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಪಾಂಡುರಂಗಪ್ಪ, ಉಪ ನಿಬಂಧಕರು–1, ಬೆಂಗಳೂರು ವಲಯ, ಬೆಂಗಳೂರು ಇವರನ್ನು ಆಡಳಿತಾಧಿಕಾರಿಯಾಗಿ ಆರು (6) ತಿಂಗಳ ಅವಧಿಗೆ ನೇಮಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಆಡಳಿತ ಮಂಡಳಿಯ ಅವ್ಯವಹಾರಗಳನ್ನು ಸರಿಪಡಿಸಿ, ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ. ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿಯನ್ನು ಸಹ ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಹಕಾರ ಇಲಾಖೆ

ಪಿ.ಆರ್. 1158